# ಭಾರತಸಂದೇಶ

✻

(ನಾಟಕ ಕೃತಿ)

✻

ಶ್ರೀನಿವಾಸರಾವ್, ಕದಿರೆ

✻



957

# ಭಾರತಸಂದೇಶ

ಇದರೊಳಗೆ ಕೃಷ್ಣ ಪರಮಾತ್ಮನ ವಿಚಾರತತ್ಪರತೆಯ ವ್ಯಕ್ತಿ ಚಿತ್ರದ ಮುಂದೆ ವಿವಿಧ ಶಕ್ತಿಗಳ ಶರಣಾಗತಿಯನ್ನು ಚಿತ್ರಿಸಿಯದೆ. 'ಶಕ್ತಿ ಪ್ರದರ್ಶನ'ದಲ್ಲಿ ಶಕ್ತಿಸ್ವರೂಪರಾದ ಭೀಮ ಅಶ್ವತ್ಥಾಮರು ಇದಿರಿದಿರಾಗಿ ಬಳಲುವುದಿದೆ. ಕುರುಸೇನಾಕರ್ತವ್ಯಕ್ಕಾಗಿ ಶಕ್ತಿಯನ್ನು ಶಕ್ತಿಯಿಂದಲೇ ಗೆಲ್ಲವೆನೆಂಬ ಅಶ್ವತ್ಥಾಮನು, ಉನ್ಮಾದಗೊಂಡು ವಧಾಕೃತ್ಯಗಳನ್ನೆಷ್ಟೆ ಮಾಡಿ ಬಳಲಿ ಪಶ್ಚಾತ್ತಾಪಪಡುತ್ತಾನೆ. 'ಹಿಂಸೆಯ ಸೋಲೆ'ಂಬುದೇ ಪ್ರೇಮದ ವಿಜಯವಾಗಿ, ನಿಶ್ಯಸ್ತ್ರೀಕರಣವನ್ನು ಎಲ್ಲರೂ ಸ್ವೀಕರಿಸುತ್ತಾರೆ. ಹಾಗೆಯೇ ಧರ್ಮರಾಯನ ಸಾವಧಾನ, ಅರ್ಜುನನ ಶೌರ್ಯಪ್ರಿಯತೆ, ದ್ರೌಪದಿ, ನಕುಲ ಸಹದೇವಾದಿಗಳ ನಿರುಪಾಯ ನಿಸ್ಸಹಾಯತೆಗಳು, ಒಂದಲ್ಲ ಒಂದು ರೀತಿಯ ಅಪೂರ್ಣ ವ್ಯಕ್ತಿಗಳಾಗಿ ಕಾಣುತ್ತವೆ.

ಕೊನೆಗಂತೂ ವಿಚಾರತತ್ಪರನಾದ ಕೃಷ್ಣ ಪರಮಾತ್ಮನು ಎಲ್ಲರಿಗೂ ಹಿತವಾದ ಸ್ವಾತಂತ್ರ್ಯವನ್ನು ಸಾರುತ್ತಾನೆ.

ಕೆಲವೆಡೆ ಅಲ್ಲಲ್ಲಿ ಪಾತ್ರಗಳು ಮೂಲದಲ್ಲಿದ್ದದ್ದಕ್ಕಿಂತ ಪರಿವರ್ತನೆಗೊಂಡಂತೆ ಕಾಣುವುದಿದ್ದರೆ, ಅವು ಆಧುನಿಕ ವಿಷಯಗಳ ಪ್ರತಿಪಾದನೆಗಾಗಿ ಮಾತ್ರ, ಅಲ್ಲದೆ ಮೂಲಕಥಾವಸ್ತುವನ್ನೆ ಆದಷ್ಟು ಮಟ್ಟಿಗೆ ದೃಢೀಕರಿಸಿದೆ. ಶಕ್ತಿಪ್ರಯೋಗವು ಫಲಕಾರಿಯಾಗದಿದ್ದಲ್ಲಿ ಒಂದು ತರದ ಉನ್ಮಾದವುಂಟಾಗಬಹುದೆಂಬುದಾಗಿ ಅಶ್ವತ್ಥಾಮನ ಕೃತಿಗಳಿಗೆ ಸಮರ್ಥನೆಯನ್ನು ಕಲ್ಪಿಸಿದುದಾಗಿದೆ.

# ಭಾರತಸಂದೇಶ



(ನಾಟಕ ಕೃತಿ)



ಶ್ರೀನಿವಾಸರಾವ್, ಕದಿರೆ.

1957

ಬೆಲೆ: ರೂ. 2.

॥ ಓಂ ॥

ಹತ್ತು ಸೀಮೆಯ ಬಳಸಿ ಬರಲಿ ನಲ್ಮೆಯದೊಂದು
ಹೊತ್ತು ಮೂಡಿದ ರೀತಿ ಬೆಳಕ ತಂದು;—
ವೃತ್ತಿಯೊಳಗಾ ಬೆಳಕು ಕೊಡಲಿ ಪ್ರತಿಭೆಯನೆಮಗೆ,
ಚಿತ್ತಕದುವೇ ನಿತ್ಯ ಸುಖವೀಯಲಿ.

# ಮುನ್ನುಡಿ

"All the world's a stage,
And all the men and women merely players"
*—Shakespeare.*

ಪೌರಾಣಿಕ ವಿಷಯಗಳು ಯುಗ ಯುಗಾಂತರಗಳಲ್ಲೂ ಪ್ರಪಂಚಕ್ಕೆ ಅನ್ವಯಿಸಿಕೊಳ್ಳತಕ್ಕ ಸಾಧನಗಳಾಗಿವೆ ಎಂಬುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಅವುಗಳಿಂದ ವ್ಯಕ್ತವಾದ ತತ್ವಗಳು ಸನ್ಮಾರ್ಗದರ್ಶಕಗಳಾಗಿ ಯಾವತ್ಕಾಲವೂ ಪ್ರಕಾಶಯುಕ್ತವಾಗಿವೆ. ಈ ಕೃತಿಯಲ್ಲಿ, ಶ್ರೀಕೃಷ್ಣಪರಮಾತ್ಮನ ರಾಜಕೀಯ ಧೋರಣೆ, ಪ್ರೇಮದ ಹಿನ್ನೆಲೆಯಿಂದ ಉಂಟಾದ ಜನತೆಯ ಹಿತ ಸಾಧನೆ, ಇತ್ಯಾದಿ ವಿಚಾರಗಳು ನಿರೂಪಿಸಲ್ಪಟ್ಟಿವೆ. ಇವುಗಳು ಆಧುನಿಕ ಯುಗದಲ್ಲಿ ಮಾನವ್ಯತೆಯ ಶಾಂತಿಪ್ರಿಯತೆಯನ್ನು ತೋರಿಸುವುದರೊಡನೆ ವಿಶ್ವತತ್ವವನ್ನೇ ಧ್ವನಿಸಬಹುದೆಂಬ ಸೂಚನೆ ಇದರಲ್ಲಿ ಅಡಕವಾಗಿದೆ.

ರಂಗಭೂಮಿಗೆ ಅನುಕೂಲವಾಗುವಂತೆ, ಈ ನಾಟಕವು, ಸಂಪೂರ್ಣವಾಗಿಯೂ ಅಥವಾ ಖಂಡ ಖಂಡವಾಗಿಯೂ ಅಭಿನಯಿಸಲ್ಪಡುವುದಕ್ಕಾಗಿ, ಪರಿಚ್ಛೇದಗಳಾಗಿ ವಿಂಗಡಿಸಲ್ಪಟ್ಟಿದೆ.

ಈ ಕೃತಿಯು ಬೆಳಕು ಕಾಣುವುದಕ್ಕೆ ಸಹಕಾರವನ್ನಿತ್ತ ಮಿತ್ರರೆಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಲಿಸುತ್ತೇನೆ.

ಶ್ರೀನಿಳಯ, ಮಂಗಳೂರು,
ಸೌರಮಾನ ಯುಗಾದಿ,
ತಾ. 14—4—1957.

ಶ್ರೀನಿವಾಸರಾವ್, ಕದಿರೆ.

# ದೃಶ್ಯ ಪರಿಚಯ

## ಒಂದನೆಯ ಅಂಕ

1. ಪಾಂಡವರ ಶಿಬಿರ ಮತ್ತು ಕುರುಕ್ಷೇತ್ರದ ಒಂದು ಭಾಗ.
2. ಪಾಂಡವರ ಶಿಬಿರದಲ್ಲಿ ಧರ್ಮಜನ ಶುಶ್ರೂಷಾಲಯ.
3. ಕೌರವರ ಶಿಬಿರ.
4. ಕುರುಕ್ಷೇತ್ರ.
5. ಸ್ಮಶಾನ ಕುರುಕ್ಷೇತ್ರದಲ್ಲಿ ಕೌರವನ ವೀರಶಯ್ಯೆ.
6. ನಿರ್ಜನ ಕುರುಕ್ಷೇತ್ರದಲ್ಲಿ ಕೌರವನ ಪತನಶಯ್ಯೆ.

## ಎರಡನೆಯ ಅಂಕ

7. ಭೂಶಾಯಿ ಕೌರವನ ಪತನಶಯ್ಯೆ.
8 ಗೌತಮಾಶ್ರಮದ ಮುಂಭಾಗ.
8. ಧೃತರಾಷ್ಟ್ರ ಸಾರ್ವಭೌಮನ ಆಸ್ಥಾನ.
10. ಶ್ರೀಕೃಷ್ಣನ ಸಭಾಸದನ.

## ಪರಿಚ್ಛೇದಗಳು

1. ಗಾಂಡೀವದ ಮಹತ್ವ.
2. ಶಕ್ತಿಪ್ರದರ್ಶನ.
3. ಹಿಂಸೆಯ ಸೋಲು.
4. ಉನ್ಮಾದ.
5. ಶಸ್ತ್ರಸನ್ಯಾಸ.
6. ಶಾಂತಿ ವಿಜಯ.

## ಪಾತ್ರಗಳು

ಶ್ರೀಕೃಷ್ಣ. ಅಶ್ವತ್ಥಾಮ. ಭೀಮ. ಕೌರವ. ಅರ್ಜುನ. ಧರ್ಮರಾಯ. ದ್ರೌಪದಿ. ಗೌತಮ ಋಷಿ. ವ್ಯಾಸಮಹರ್ಷಿ. ಕೃಪಾಚಾರ್ಯ. ಧೃತರಾಷ್ಟ್ರ. ನಕುಲ. ಸಹದೇವ. ನಂದಿ. ಚರ. ಶಲ್ಯ. ಕರ್ಣ. ಭಗವಾನ್ ಸ್ವರೂಪ. ಜಯಲಕ್ಷ್ಮಿ ಭಾಗ್ಯಲಕ್ಷ್ಮಿ

■■■■■■■■

# ದೃಶ್ಯನಿರೂಪಣೆ ಮತ್ತು ಪಾತ್ರವರ್ಗ

**೧. ಗಾಂಡೀವದ ಮಹತ್ವ—ದೃಶ್ಯ ೧ ಮತ್ತು ೨.**

ಪಾತ್ರಗಳು:—ಭೀಮ, ಚರ, ಕರ್ಣ, ಶಲ್ಯ, ದ್ರೌಪದಿ, ಧರ್ಮಜ, ಕೃಷ್ಣಾರ್ಜುನರು.

**೨. ಶಕ್ತಿಪ್ರದರ್ಶನ—ದೃಶ್ಯ ೩ ಮತ್ತು ೪.**

ಪಾತ್ರಗಳು:—ಕೌರವ, ಅಶ್ವತ್ಥಾಮ, ಕೃಷ್ಣ, ಅರ್ಜುನ.

**೩. ಹಿಂಸೆಯ ಸೋಲು—ದೃಶ್ಯ ೫ ಮತ್ತು ೬.**

ಪಾತ್ರಗಳು:—ಅಶ್ವತ್ಥಾಮ, ಕೌರವ, ನಂದಿ, ಕೃಷ್ಣ, ಯುಗಪುರುಷ, ಭಗವಾನ್ ಸ್ವರೂಪ, ಜಯಲಕ್ಷ್ಮಿ ಮತ್ತು ಭಾಗ್ಯಲಕ್ಷ್ಮಿಯರು.

**೪. ಉನ್ಮಾದ—ದೃಶ್ಯ ೭.**

ಪಾತ್ರಗಳು:—ಅಶ್ವತ್ಥಾಮ, ಕೌರವ.

**೫. ಶಸ್ತ್ರಸನ್ಯಾಸ—ದೃಶ್ಯ ೮.**

ಪಾತ್ರಗಳು:—ಕೃಷ್ಣ, ಅರ್ಜುನ, ಅಶ್ವತ್ಥಾಮ, ಭೀಮ, ದ್ರೌಪದಿ, ಧರ್ಮಜ, ನಕುಲ ಸಹದೇವರು.

**೬. ಶಾಂತಿವಿಜಯ—ದೃಶ್ಯ ೯ ಮತ್ತು ೧೦.**

ಪಾತ್ರಗಳು:—ಧೃತರಾಷ್ಟ್ರ, ಧರ್ಮಜ, ಕೃಪಾಚಾರ್ಯ, ವ್ಯಾಸಮಹರ್ಷಿ, ಅರ್ಜುನ, ನಕುಲ ಸಹದೇವರು, ಗೌತಮಋಷಿ, ಕೃಷ್ಣ, ಭೀಮ.

# ಭಾರತಸಂದೇಶ

## (ಮೊದಲನೆಯ ಅಂಕ)

### ಗಾಂಡೀವದ ಮಹತ್ವ

ಶ್ರೀಕೃಷ್ಣ ಪರಮಾತ್ಮನ ನಿಯಮದಂತೆ, ಹದಿನಾರು ದಿವಸಗಳ ಭಾರತ ಯುದ್ಧವು ಕಳೆದುಹೋಗಿದೆ. ಕರ್ಣನ ದಿವ್ಯಾಸ್ತ್ರ ಪ್ರಯೋಗದಿಂದಾಗಿ ಜರ್ಜರಿತವಾದ ದೇಹದಿಂದ, ಧರೆಗೊರಗಿದ ಧರ್ಮರಾಯನನ್ನು ಕುರುಕುಲೇಶನ ಸ್ವಾಧೀನಪಡಿಸುವುದಕ್ಕಾಗಿ, ಎಳೆದೊಯ್ದಿದ್ದಾರೆ. ಪಾಂಡವರ ಶಿಬಿರವು ನಿಸ್ಸಹಾಯಕವಾಗಿದೆ. ಧನಂಜಯನು ಪಾತಾಳಲೋಕದಲ್ಲಿ ಸಮಸಪ್ತಕರೊಡನೆ ಯುದ್ಧದಲ್ಲಿ ತೊಡಗಿದ್ದಾನೆ. ಬಾಹುಬಲಿ ಭೀಮನ ಹೊರತು, ಧರ್ಮದ ಕಡೆ ಯಾರೂ ಇರಲಿಲ್ಲ.

ನಡುಗುವವಯವಗಳಿಂದ ಚರನೊಬ್ಬನು ಪ್ರವೇಶಿಸಿ, ಭೀಮಸೇನನ ಕಾಲ್ಗೆರಗಿ ನುಡಿಯುತ್ತಾನೆ,—

**ಚರ**—ಹದಿನಾರು ದಿನ ಕೊಳುಗುಳಂ ನಡೆದರಿದು ತನಕ,
ಧರ್ಮದೇವನ ದೆಸೆಯು ಪಿಂತೆಸೆಯದಿರೆ, ದೇವ,
ಉಸುರಲೆನ್ನಳವಲ್ಲ; ಕರ್ಣಸಾಹಸವಿಂದು !!

**ಭೀಮ**—ಆರಿವನು? ಚರನೆಮ್ಮ! ಏಕಿಂತು ನಡುಗುತ್ತ
ನುಡಿಯುತಿಹೆ? ಧರ್ಮದೇವನ ಗುಡಿಗೆ ನಡುಕವಿಂ-
ದನ್ನೆಗಂ ಬಂದಿಲ್ಲ. ನೀನಿಂದು ನಡುಗುತ್ತ,
ನುಡಿಯಲಾರದೆ ನುಡಿವೆ! ಸೊಲ್ಲಿಸೆಲೆ ಬಂದೆಡರ.

**ಚರ**—ಕುರುಕುಲದ ಸಾಹಸಿಯು,—

**ಭೀಮ**—ಬಲ್ಲೆನದ. ಮಗುಳೊಮ್ಮೆ,
ಸಾಹಸಪದವನುಚ್ಚರಿಸದಿರೈ — ಪೇಳ್ವುದಂ
ಪೇಳೆನ್ನ ಸಮ್ಮುಖದಿ.

ಚರ— ಕರ್ಣ ತಾ, ಧರ್ಮದೇ-
ವನನಸ್ತ್ರನಿಚಯದಿಂ ಹಿಡಿದೆಳೆದು ಕುರುಕುಲ-
ಕ್ಕೆಳೆದೊಯ್ದ,— ಕೆಡಹುತಿಹ — ಪೇಳಲದ—

ಭೀಮನ ಅಸ್ತವ್ಯಸ್ತವದನಾಕಾಶವು, ಕಾರ್ಮೋಡಗಳಿಂದ ತುಂಬಿತು. ವಿಷಾದಮಯ ಪಾಳಯವು ಭೀಮನ ಹುಂಕಾರದಿಂದ ಬಿರಿಯಿತು. ಚರನಲ್ಲಿ ನಿಂದಿರದೆ, ಮಾಯವಾದನು.

ಭೀಮ— ನಡೆಯಿರೈ ರಾಹುತರು,— ಕೌರವನ ಕಾರಿರುಳ
ಹರಿದೆಸೆಯೆ ಮೆರೆವೆಮ್ಮ ಕಿರಣ ಚೂರ್ಣಗಳು !!
ಪರಮಾತ್ಮನಿಂಗಿತದ ಹದಿನೆಂಟು ದಿನ ದಾಹವಂ
ಹದಿನಾರರೊಳೆ ತೀರ್ಚುವೆನು ! ನೋಳ್ಪೆ !! ಈ ಹೆಗಲ-
ನೇರಿರ್ದ ಗಧೆಗಿಂದು ಹಬ್ಬದೂಟವು ! ಬದುಕು-
ವರು ಬದುಕಿರಲಿ ! ಅಣ್ಣನಯ್ಯನೊಳಗವ ನಾ-
ನೇ ಕೊಂಬೆ ! ಎನ್ನ ಗಧೆಯೇ ಕಾಂಗವಿಜಯಿಯೆಂ-
ದೆಸಗುವೆಂ ! ದೇವಂಗಿದೇ ಪ್ರಣಾಮಂಗಳುಂ !!

ಎಂದು ಗಧಾಧಾರಿ ಭೀಮನು, ಕೌರವಸೇನಾಶರಧಿಯಲ್ಲಿ ದುಮ್ಮಿಕ್ಕಿದನು. ಇದಿರಿಗಿದ್ದ ರಥಾರೋಹಿ ಕರ್ಣನು ಇದನ್ನು ನೋಡಿದನು.

ಕರ್ಣ— ಅರಯ್ಯ! ಸಾರಥಿಯೆ! ನೋಡಿದೆಯ? ಸಮ್ಮುಖದಿ
ಪ್ರಳಯ ತಾಂಡವನೆಸಗಿ, ತುಂಬಿದೆದೆ ಅಟ್ಟಹಾಸಂ
ಬೀರಿ ಬರುತಿರ್ಪ ವೈರಿ ವೀರಂ? ಆರ-
ವಂ? ಪೇಳೆನೆಗೆ; ಈ ವರೂಥವಂ ಅವನಿದಿರಿ-
ಗಡ್ಡೈಸಿ ನಿಲಿಸಯ್ಯ! ತಡವೇಕೆ? ಎಮ್ಮ ಸೈ-
ನಿಕವದೋ ಭಯದಿಂದ ಕಂಗೆಟ್ಟು ಚದರಿಹುದು!
ಸಾರಥಿಯೆ! ತಡವೇಕೆ?

ಶಲ್ಯ— ಏಂ ನುಡಿವೆ? ಕೊಳುಗುಳದ
ಕೂರ್ಮೆಯಿಂ ಪೆರ್ಚಿದ್ದ ನಿನ್ನೆದೆಯು ಕಾಲಕಾ-
ಲಕೆ ತಕ್ಕ ಓಲಗವನೊಪ್ಪದದು ! ಆ ಮಹಾ
ವೀರನವನಾರೆಂದು ತಿಳಿದಿರುವೆ?

**ಕರ್ಣ**—ಸಾರಥಿಯೆ!

ಸಾರಥಿಯು ನೀನೈಸೆ; ನುಡಿದೆನ್ನ ಅಪ್ಪಣೆಯ
ಪಾಲಿಕುಂವೇಳ್ಕುಮಲ್ಲದೆ, ಮಾತ ನುಡಿಯದಿರು;
ವೈರಿಯಂ, ವೀರಂ ಮಹಾವೀರನೆಂದೆನಗೆ,
ನುಡಿ ನುಡಿದು ಹೊಗಳುವಂ ಹೇಡಿಯೈ.

**ಶಲ್ಯ**—ಏನೆನಲಿ;

ಕುರುಕುಲೇಶಗೆ ನಾನು ನಿನ್ನಲ್ಲಿ ಸಾರಥ್ಯ-
ವನ್ನೊಪ್ಪಿ ಬಂದುದತಿ ತಿಳಿಗೇಡು; ಆ ವೀರ-
ನಾರೆಂದು ತಿಳಿವನಿತು ತಾಳ್ಮೆ ನಿನ್ನಂತರವ-
ನುಳಿದಿಹುದು! ಅವನಿದಿರು ರಥವನ್ನು ಹಾರಿಸೆಂ-
ದುಸುರುತಿಹೆ! ಭೀಮನಾತಂ! ಭೀಮ! ಕಲಿಭೀಮ!

**ಕರ್ಣ**—ನುಡಿಯೊಳೇ ಇನಿತಿನಿತು ಕಾಲಮಂ ಕಳೆದೆನ್ನ

ಕಲ್ಪನೆಯ ಕೆಡಿಸುತಿಹೆ! ಭೀಮನಾಂ ತಿಳಿದಿಲ್ಲ-
ವೆಂದೆಯೇಂ? ಈ ದಿನಂ, ಪೂಜ್ಯ ಗುರು ಪರಶುರಾ-
ಮಂ ತನಗೆ ತನ್ನಸ್ತ್ರ ಫಲಿಸಲೆಂದೊಲಿದಿತ್ತ
ದಿನವೈಸೆ! ಆರಾದೊಡೇನವನ ಸೊಕ್ಕಿಂದು
ಮುರಿವೆನಾಂ; ಕರ್ಣಾಸ್ತ್ರಮಯಮೆಂದು,
ತೋರ್ಪೆನೀ ರಣಭೂಮಿ! ನೋಡದರ ಮಹಿಮೆ-
ಯಂ! ಮತ್ತೆ ನುಡಿ.

**ಶಲ್ಯ**—ನಿನ್ನಿಚ್ಛೆಗಡ್ಡೈಸಿ ಬರಲೇಕೆ? ಮುನ್ನ ಬಹ

ತೊಡರ ನಾನುಸುರಿದೆನು; ನಿನಗದುವು ಕಹಿಯಾಯ್ತು;
ಪ್ರತ್ಯಕ್ಷ ನೀನಿಂದು ನೋಡದನು, ಭೀಮನವ.

ಎನಲು, ಕ್ಷಣಾರ್ಧದಲ್ಲಿ ಕರ್ಣವರೂಥವು ಭೀಮನ ಸಮ್ಮುಖವಾಯ್ತು. ಕರ್ಣನು ಒಂದೇ ಸಮನೆ ಭೀಮನ ಮೇಲೆ ಶಸ್ತ್ರದ ಜಡಿಮಳೆಯನ್ನು ಸುರಿಸಿದನು, ದಿವ್ಯಾಸ್ತ್ರಶಕ್ತಿಯನ್ನು ನೋಡಿ ಮೆಚ್ಚಿದನು ಶಲ್ಯನು.

**ಶಲ್ಯ**—ಕರ್ಣ! ನಿನ್ನಸ್ತ್ರಶಕ್ತಿಯನು, ಕಂಡೆನ್ನ ಮನ-

ವಿಂದು ಸಂತಸದಿ ಕೊನೆಯುತಿದೆ. ಕರಚಳಕದಲಿ

ಅರಿಸೇನೆ ಕಂಗೆಟ್ಟು ಚದರಿಹುದು! ಭೀಮನವ
ಬರುವಸ್ತ್ರಗಳನಿರಿಯೆ ತೊಳಲುತ್ತ ನಿಂದಿಹನು!
ನೀನಹುದು ಸಾಹಸಿಯು! ಕರಯುಗಲದಿಂ ನಿನ್ನ
ಕಣೆಗಳನ್ನೊಂದೊಂದೆ ಮುರಿದವನು ಮಗುಳೆಸೆಯು-
ತಿಹನಲ್ಲಿ! ನೋಡಯ್ಯ, ನೋಡವನ ಪರಿಯನಿತು.

**ಕರ್ಣ**—ಏನೆಂದೆ! ಕುಲಗುರುಂ, ಸಾಕ್ಷಾತು ಭಾರ್ಗವಂ
ಸಹಮೆನ್ನ ಶಕ್ತಿಯನು ಮೆಚ್ಚಿಹನು! ಈ ಭೀಮ,
ಅರ್ಜುನಂ, ಮಗುಳುಳಿದ ಅನುಜರುಂ, ಇವರೇನು?
ಕಲಿಗಳೇ? ನೋಡಸ್ತ್ರ ಮಹಿಮೆಯಂ ಇನ್ನೊಮ್ಮೆ!

**ಶಲ್ಯ**—ಭಲ! ಭಲಾ! ಶಕ್ತಿಯುತನ್ನೈಸೆ ನೀಂ! ಇದುತನಕ
ನಿನ್ನೊಡನೆ ಬೆರೆವುದಕೆ ಎಡೆಯಿಲ್ಲ! ಇಂದಾನು
ಮನಗಂಡೆ; ಬಿಡುಶಸ್ತ್ರ; ಭೀಮನೆಲ್ಲಂ ಕಡಿದು
ಮಗುಳೆಸೆವ ಕಣೆಗಳನು ಖಂಡಿಸುತ ಪ್ರತಿಶರವ-
ನಿರದೆಸೆಯು; ಕಣ್ತುಂಬ ನೋಡಿ ನಾಂ ದಣಿವೆನ್ನೈ.

ಈ ಮಾತುಗಳಿಂದ ಉಬ್ಬಿದ ಕರ್ಣನು, ಸರ್ವಶಕ್ತಿಯನ್ನೂ ತೋರಿ ಪ್ರಯೋಗಿಸಿದ ಕಣೆಗಳು ಭೀಮನನ್ನು ನಾಲ್ದೆಸೆಗಳಿಂದಲೂ ಮುಸುಕಿ ಕಂಗೆಡಿಸಿದವು. ರೋಷಭೀಷಣನಾದ ಭೀಮನು ಎಷ್ಟು ಶಕ್ತಿಯಿಂದ ಅವುಗಳನ್ನು ಖಂಡಿಸಿದರೂ ಮತ್ತೂ ಬರುತ್ತಿದ್ದುವು. ಎಲ್ಲೆಡೆಯೂ ಕರ್ಣಾಸ್ತ್ರಮಯವಾಯ್ತು! ಪ್ರಳಯಸ್ವರೂಪನಾಗಿ ಭೀಮನು, ಖಡ್ಗಧಾರಿಯಾಗಿ, ತನ್ನ ರಥದಿಂದ ಕರ್ಣನ ರಥಕ್ಕೆ ಹಾರಿ, ಅತನ ಜುಟ್ಟನ್ನೆಳೆದು ಶಿರಚ್ಛೇದನ ಮಾಡುವಾಗ ತಡೆದು

**ಶಲ್ಯ**—ತಡೆ ಭೀಮ! ಕೊಲ್ಲದಿರು; ದಯೆದೋರು!—ಇವನಲ್ತೆ
ಕುರುಕುಲೇಶನ ಪ್ರೇಮದಾಮಿತ್ರ! ಅವನಿಗಿರು-
ವೊಂದಾಸೆಯಾ ಕೊನೆಯು! ನೀನವನ ಕೊಲ್ಲದಿರು!—
ಪರಮಸಾಹಸಿ ನೀನು.

ಭೀಮ—ಏಕೆನ್ನ ತಡೆವೆ ನೀಂ?

ಕುನ್ನಿಯಿದು ಉಳಿದರೇನಳಿದರೇಂ? ತನ್ನಸ್ತ್ರ
ದಿವ್ಯವೆಂದೆನ್ನನಿಂದಿವನಿಂತು, ಜುರ್ಜಿದನು.
ತಡೆಯದಿರು, ದಯೆಯೇಕೆ? ಸಾಕಿವನ ಬಾಳಿನಿತು!

ಶಲ್ಯ—ಕೊಲ್ಲದಿರು!, ಕಾಲ್ಗೆರಗಿ ಶರಣೆಂಬ ನರನ, ನೀ
ಕೊಂದೇಕೆ ಕೆಡಬೇಕು? ಬೇಡುವೆನು, ಬಿಟ್ಟುಬಿಡು!
ತಮ್ಮನಾ ಶಪಥವನು ಭಂಗಿಸುವ ಬಗೆ ನಿನಗೆ
ಬೇಡೆಂಬೆ! ಬಿಟ್ಟು ಬಿಡು! ಸಾಹಸಿಯು ನೀನಲ್ತೆ!

ಭೀಮ—ಬದುಕಿರಲಿ ನಾಯಿಯೊಲು,—ಇವನಸ್ತ್ರವುಹಿಮೆ-
ಯನು ಮೆರೆಸಲೆನ್ನನುಜನೊಳು. ಕುನ್ನಿಯೇ,
ತೊಲಗು ನೀ; ತೊಲಗೆಲವೊ! ನಡೆ;—ಎನ್ನ
ಮಾವನಂ ಮನ್ನಿಸಿದೆ;

ಶಲ್ಯ—ಕಾರಣಕೆ ಕೋಪಿಯೂ ದಯವಂತನಾಗುವನು.

(ಎನಲು ತೆರೆ ಬೀಳುವುದು.)

\-\-\-\-\-\-\-\-

## ದೃಶ್ಯ ೨

ಪಾಂಡವರ ಶಿಬಿರದಲ್ಲಿ ಧರ್ಮಜನು ಕುಳಿತಿರುವನು. ಕರ್ಣನಸ್ತ್ರಗಳಿಂದಾದ, ಧರ್ಮಜನ ಗಾಯಗಳಿಗೆ ಪಾಂಚಾಲೆಯು ಶುಶ್ರೂಷೆ ನಡೆಸುತ್ತಿದ್ದಾಳೆ,— ನೊಂದಿರುವ ಧರ್ಮಜನ ಬಳಿಯಲ್ಲಿ ಬೇರೆ ಯಾರೂ ಇರಲಿಲ್ಲ.

**ಧರ್ಮರಾಯ**— ಆ ಕಣೆಗಳೇಂ ಕ್ರೂರತರವಿಹುದು! ಕರ್ಣಾಸ್ತ್ರ-
ಕೆಂತುಟೋ ಶಕ್ತಿ! ಕಡುಧೀರ! ಭೀಮನು ಬಾರ-
ದಿರ್ದೊಡಾಂ ಕೌರವನ ಸೆರೆಮನೆಯ ಸೇರುತ್ತ-
ಲಿರ್ದೆ! ನಾಂ ಬಲುನೊಂದೆನಾಹವದಿ, ದ್ರೌಪದಿಯೆ!

**ದ್ರೌಪದಿ**— ಪಾಳಯವು ಬರಿದೆಂಬ ಸಮಯವನೆ
ಸಾಧಿಸಿದ ಕರ್ಣ! ಧರ್ಮವು ತನ್ನರಸನಾಶ್ರಯವನೊಂದಿ,
ಬಾಳಲೆನೆ ಬಗೆದನೇಂ?

**ಧರ್ಮರಾಯ**— ನಾಡಿನಾಸೆಗೆ ನೀವು,
ಸಮರವನೆ ಸಂಘಟಿಸಿ, ಬಳಲಿದಿರಿ; ಅದರೊಡನೆ
ಕೌರವನ ಸಾಮ್ರಾಜ್ಯಕವನತಿಯನೇಕೆ ನಾವ್
ತಂದೊಡ್ಡ ಬೇಕಿನಿತು! ಅನುಜರಾದರೆ, ಧರೆಯ-
ನಾಳಲಸಮರ್ಥರೇಂ? ಏಕಿನಿತು ವೈರಾಗ್ಯ?

**ದ್ರೌಪದಿ**— ಧರ್ಮಜಂ ನೀನು! ಧರ್ಮದಲಿ ಲೌಕಿಕದ
ರೀತಿಯನು ಬೆರೆಸುವುದೆ ಮೆಚ್ಚುಗೆಯು! ಹೀಗಿರಲು
ಸಾವಧಾನಂ ಮೇಲ್ಮೆಯೆಂದೆನಿಸಿ ಎನಿತೆನಿತು
ಕಷ್ಟಗಳ ಜನ್ಮದಲಿ ಸಹಿಸಿದೆವು! ವನವಾಸ-
ದುಪವಾಸ! ಕಾಂತಾರದಲೆದಾಟ!! ಅಜ್ಞಾತ-
ದಲಿ ನೀಚ ಕೀಚಕನ ಕೈಯಿಂದ ಬಳಲಿದೆನು!
ಪತಿಗಳೈವರು ನೀವು ಗಂಡುಗಲಿಗಳು ನೋಡೆ!
ಭೀಮನಾ ಪ್ರಳಯರುದ್ರಂ, ಬಳಿಕ ಅರ್ಜುನಂ
ಭೂತ್ರಯಕಜೇಯ ತಾಂ! ನೀ ಧರ್ಮದೇವನೈ!

ಆದರೂ ಎನ್ನ ದೆಸೆ,—ಅನುದಿನಂ ಕಣ್ಣೀರ
ಸುರಿಸಿ ಕೊರಕೊರಗಿ ಕೌರವರ ಕೈವಾಡವೆಂ-
ಬಂತೆ ಕಷ್ಟವನು ಪಡುವುದೇ! ಅಹಾಹ!
ಭಾಗ್ಯವೇ? ಈ ರಾಜ್ಯಕಡಿಯಿಟ್ಟ ನಂತರಂ
ಸುಖವೆನಗೆ ಬಿಸಿಲುಗುದುರೆಯು ತೆರದಿ ಆಗಿಹುದು!
ಜನ್ಮದಲಿ ನಾ ಪಡೆದ ಕರ್ಮವಿದು! ನೀನಲ್ತೆ,
ಸತ್ಯಸಂಧಂ, ಪ್ರಜ್ಞ! ಆದರೇಂ! ಕಷ್ಟಗಳ
ಮುಂಗಾವಲಾಗಿಹುದು ಸತತವೀ ಸತ್ಯಧ-
ರ್ಮವು! ನಾವದರ ಪಿಂತೆ; ಏತಕೀ ಜನ್ಮಗಳು!
ಮಾನಿನಿಯು ಮಾನವನು ಆ ದಿನದಿ ಭಗವಂತ-
ನಲ್ಲದೊಡೆ ಕಾಯ್ದರಾರ್! ಮಾನಭಂಗದ ಸಮಯ
ಬಿಚ್ಚಿರ್ದ ಕೇಶವಿದುತನಕವೂ ಕಟ್ಟಿಲ್ಲ!
ಶಪಥವನು ಕೈಕೊಂಡೆ, ಪೂರೈಸುವವರಾರು!

**ಧರ್ಮರಾಯ**—ಪಾಂಚಾಲಭೂಪತಿಯ ಸಂಪತ್ತು ಶರಧಿಯಿಂ-
ದೊಗೆದಿರುವ ರತುನವೇ! ನಿನ್ನತುಲ ಸೌಭಾಗ್ಯ
ಸುಖದ ಸಂಜೀವನವು ನಮ್ಮಿಂದ, ನಮ್ಮ ಒಡ-
ನಾಟದಿಂ ನಾಶವಾದುದು ಪ್ರಿಯೇ! ದೇಸಿಗರ
ನಿರ್ಭಾಗ್ಯ ಪುತ್ರರಂ ಎಮ್ಮನ್ನು ಸೇರ್ದಂದು
ನಿನಗಿಂತು ಕಷ್ಟವಿದು.

ಕೃಷ್ಣಾರ್ಜುನರ ಪ್ರವೇಶ, ಅರ್ಜುನನು ಧರ್ಮಜನ ಕಾಲ್ಗೆರಗುವನು.

**ಕೃಷ್ಣ**—ಧರ್ಮಜಾ! ಕಣ್ಣೀರು
ಸುರಿಸುತಿಹೆ! ಏನಿದೀ ವಿಪರೀತ! ಆರೀಕೆ!
ದ್ರೌಪದಿಯು! ತಂಗಿ, ನೀ ಅಳುತಿರುವೆ! ಏಂಭವಣೆ
ಪೇಳೆನಗೆ!

**ಧರ್ಮಜ**—(ಕುಳಿತಲ್ಲಿಂದಲೇ ವಂದಿಸುವನು.)

**ದ್ರೌಪದಿ**—(ವಂದಿಸಿ) ಭವಣೆಯೇಂ? ಎನಗೇನು ಭವಣೆಗಳು! ಭಗವಂತ-
ನನುಜೆ! ತ್ರೈಭುವನ ಪ್ರಖ್ಯಾತರಂ ವರಿಸಿಹೆನು!!
ಧರ್ಮಜಂ ಜರ್ಜರಿತನಾಗಿಹನು! ಆದರೂ
ಎನಗೇನು ಭವಣೆಗಳು—?

**ಅರ್ಜುನ**—ಕೃಷ್ಣೆಯೇ, ನಿನ್ನ ನುಡಿ ಮೊನೆಯಂತೆ ನಾಟುತಿದೆ.
ಬರಿದೇಕೆ ಹಂಬಲಿಪೆ! ಬಂದಿರುವ ತೊಡರುಗಳ
ತೊಡೆಯಲೀ ಪರಮಾತ್ಮನಿಹನೆಂದು ಮರೆತೆಯೇಂ?
ಅಣ್ಣದೇವನು ಬರಿದೆ ಮರುಗುತಿಹನೇಕೆಂದು
ಹೇಳಲಾಗದೆ ನಿನಗೆ?

**ದ್ರೌಪದಿ**—ಜರ್ಜರಿತನಾಗಿಹನು! ಕಾಂಬುದನು ಕೇಳ್ವುದೇ?
ಈ ರೀತಿ ಗೈವವರು ವೈರಿಯಲ್ಲದೆ ಬೇರೆ ಯಾರಿಲ್ಲ!
ಹೀಗಿರಲು, ಪೇಳ್ವುದೇನಿಹುದಿಲ್ಲ?

**ಅರ್ಜುನ**—ಅದಕಿಂತು ಮರುಕವೇ? ಕ್ಷತ್ರಿಯರು ನಾವೈಸೆ;
ಕ್ಷಾತ್ರಧರ್ಮದ ಮರ್ಮವೆಮ್ಮದದು! ಎಮಗೈಸೆ
ರಾಜದಂಡಂ—ಧರ್ಮದಂಡಂ!

**ದ್ರೌಪದಿ**—(ಮರ್ಮಭೇದಕವಾಗಿ ದುಃಖದಿಂದ) ಏನಿದೀ ದಂಡಗಳು!
ಕೈವಿಡಿದ ಕುಲವತಿಯು ಸಭೆಯಲ್ಲಿ ಸೆಳೆತಂದು
ಸೆರಗೆಳೆವ ಸಮಯದಲಿ ಎಲ್ಲಿರ್ದವೀ ದಂಡ
ಗಳ್? ನಾನು ಪಾಂಚಾಲ ಭೂಪತಿಯ ತನುಜೆ—ನೆರೆ
ಗಂಡುಗಲಿಗಳ ಮಡದಿ—ಸಾಕ್ಷಾತು ಪರಬ್ರಹ್ಮ
ರೂಪಿ ಶ್ರೀಕೃಷ್ಣನಿಗೆ ಸೋದರಿಯು. ಆದರೂ
ಕೌರವನ ರೌರವಕೆ ಬೆದರುವೆವು. ಧರ್ಮಜನು
ಕರ್ಣನಸ್ತ್ರದ ಸವಿಯನುಣಬೇಕು!

**ಧರ್ಮಜ**—(ಮಧ್ಯದಲ್ಲಿ ತಡೆದು) ಅರ್ಜುನನ-
ನೇಕೆ ನೀ ಮೂದಲಿಪೆ? ನಿರ್ದೋಷಿಯಾತನಹ;
ನಿಮಗೆಲ್ಲ ಎಡರೊಡ್ಡಿದವ ನಾನು. ಜೂಜಾಟ-
ವಾಡಿದೆನು; ಹೆಂಡತಿಯ ಮಾರಿದೆನು; ವನವಾಸ

ಕೈಕೊಂಡೆ; ಅಜ್ಞಾತದಲಿ ಘೋರ ಕಷ್ಟಗಳ-
ನಿತ್ತಿಹೆನು. ಈಗಲಾ ಯುದ್ಧವೇ ಒದಗಿದುದು.
ಮಾಡಿದ್ದ ತಪ್ಪಿತಕೆ ವೀರ ಕರ್ಣನು ಎನಗೆ
ಶಿಕ್ಷೆಯಿಂದಿತ್ತಿಹನು. ಅರ್ಜುನಾ! ಏನಿಂತು
ಶಿರಬಾಗಿ ನಿಂತಿರುವೆ? ಕ್ಷತ್ರಿಯರು ನೀವ್ವೈಸೆ;
ನಾವೇನು ಕ್ಷತ್ರಿಯರೆ? ಕರ್ಣಾಸ್ತ್ರಕಂಜುವರು
ನಾವಿಂದು ಕ್ಷತ್ರಿಯರೆ?—ಕ್ಷತ್ರಿಯರು ನೀವಾದ-
ರಿಂದಿನಾಹವದಲ್ಲಿ ಅರಿಸೇನೆ ಮುಂಬರಿಯೆ,
ನಿನ್ನ ಸೈನ್ಯವು ಬೆದರಿ ಕಂಗೆಟ್ಟು ಓಡುತಿರೆ,
ಎಲ್ಲಿರ್ದನಾ ಕ್ಷತ್ರಿ? ಕ್ಷತ್ರಿಯರು ನೀವ್ವೈಸೆ,—
ಓಡುತಿಹ ಸೈನಿಕರು ಕರ್ಣಾಸ್ತ್ರದಲಿ ಸಿಲುಕಿ,
ನುಚ್ಚುನೂರಾಗುತಿರೆ, ಎಲ್ಲಿರ್ದನಾ ಕ್ಷತ್ರಿ?
ಕ್ಷತ್ರಿಯರು ನೀವ್ವೈಸೆ,—ನಾಯಕನ ಸೆಳೆದೊಯ್ದು
ಕೆಡಹುತಿರೆ ಎಲ್ಲಿರ್ದೆಯೋ ಕ್ಷತ್ರಿ? 'ರಾಜದಂ-
ಡಂ'! ಏನು ಎಲ್ಲಿರ್ದುದಾ ದಂಡ? ಕ್ಷತ್ರಿಯನೆ,
ನೀನಹುದು ಕ್ಷತ್ರಿಯಂ! ದಂಡಂ ಮಹಾದಂಡ
ನಿನಗಿಹುದು,—ಕರ್ಣನಿದಿರಲ್ಲೇನು ಕುಸಿದುದೇ?
ಅವನಸ್ತ್ರದಲಿ ನಿನ್ನ ಗಾಂಡೀವ ಸುಟ್ಟುದೇ?........

**ಅರ್ಜುನ**—ಗಳಹದಿರು, ಆರಾದೊಡೇನೆನ್ನ ಗಾಂಡೀವ-
ಮಂ ಜರೆವ ಪಾಪಿಯನು ಕೊಂದಪೆನು ಎಂದಾನು
ಶಂಕರಗೆ ಪಣತೊಟ್ಟ ವ್ರತಮಹುದು. ಶಾಸ್ತ್ರವಿಹು-
ದಿಂತೆನ್ನ ದಿವ್ಯಾಸ್ತ್ರದುನ್ನತಿಯ ಕಾಯಲ್ಕೆ.

ಎಂದು ಸಾಕ್ಷಾತ್ ಧರ್ಮಪುತ್ರನನ್ನೆ ಸಂಹರಿಸಲಿಕ್ಕಾಗಿ ಗಾಂಡೀವವನ್ನು ಎತ್ತಿಹಿಡಿದಿದ್ದಾನೆ,—ತ್ರೈಭುವನವು ಭಯದಿಂದ ಹಾಹಾಕಾರವೆತ್ತಿದೆ. ಆಗ ಭಗವಾನ್ ಶ್ರೀಕೃಷ್ಣನು ಕಿರುನಕ್ಕು, ಗಾಂಡೀವಕ್ಕೆ ಇದಿರಾಗಿ ಬಂದು, ಅರ್ಜುನನನ್ನು ತಡೆದು,—

**ಭಗವಂತ**—ಏನಯ್ಯ ಅವಿವೇಕ? ಅರ್ಜುನಾ, ಅವನಾರು?
ನಿನ್ನಣ್ಣನೆಂದಿಷ್ಟೆ ತಿಳಿದೆಯಾ? ನೋಡವನ—

**ಅರ್ಜುನ**—ದೇವ! ತಡೆದೆನ್ನ ವ್ರತವನ್ನು ಕೆಡಿಸುವೆಯ ನೀಂ?

**ಭಗವಂತ**—ಏನಂಥ ವ್ರತವದುವು ಸಾಕ್ಷಾತು ಧರ್ಮಪು-
ತ್ರನ ಕೊಲುವ ವ್ರತವೊಂದು ಜಗಕಿಹುದೆ—ಅವ್ರತಂ
ಸಾಧಿಕುವೆ? ಕೊಲುವೆಡೆಯೆ ತಾನಿದುವು! ಕೊಲುವಕೊ-
ಲ್ಲಿಸಿಕೊಂಬರೀಯೆಡೆಯೊಳಿಬ್ಬರು ಅಪಾತ್ರರೈ,—
ಮೇಣೆಂತು ಕೊಲುವೆ ನೀ? ಅಂದು ಖಾಂಡವ ದಹನ
ಕಾಲದಲಿ, ಅಗ್ನಿ ತಾ ವರುಣನಿಂ ಕೊಡಿಸಿದನು
ವಿಧ ವಿಧಾಸ್ತ್ರಗಳಿವಂಗೆ; ನಿನಗೆ ದಿವ್ಯಾಶ್ವ, ರಥ,
ಧ್ವಜ, ಧನುಸು, ಗಾಂಡೀವ, ಅಕ್ಷಯಾ ತೂಣೀರ
ಬತ್ತಳಿಕೆಗಳನಿತ್ತ. ಬಳಿಕ, ನಿನಗೊಲಿದು ಶಿವ,
ಪಾಶುಪತ ಕೊಡುವಂದು, ಅಸ್ತ್ರಮಹಿಮೆಯನೊರೆದ,—
ಆತ್ಮರಕ್ಷಣೆ, ಸಕಲ ಧರ್ಮ ಸೈರಣೆ, ರಣದಿ
ವೈರಿಯೆಡೆಯಲಿ ನಿನ್ನ ವ್ಯಕ್ತಿತ್ವ ಸಾಧನೆಗೆ,
ಇಹುದದುವು; ಕಳೆಯದಿರು. ಸುವಿಚಾರಮಂಕೊಳ್ಳು.
ಶಾಸ್ತ್ರ ವೃತಗಳು ಎಲ್ಲ ಸತ್ಫಲವ ಪಡೆವುದಕೆ;
ಮಾನವತೆಯನುಕೂಲತೆಯ ಮೀರಿ
ನಿಲುವುದೇಂ! ವೃತವುಳಿಸಲೆಂದು ದುಷ್ಕೃತ್ಯಗಳ
ಗೈವುದೇಂ? ಹಲವೆಡೆಯೊಳುದ್ವೇಗ ಮಾನಸರು
ತಪ್ಪಿ ನುಡಿದರೆ, ನುಡಿಯ ಗುರಿಯನೂಹಿಸಬೇಕು.
ಮಾತ ಮಾತಿಂ ಗೆಲ್ಲು.

**ಅರ್ಜುನ**—ಏನ ಮಾಡಲಿ ದೇವ? ಧರ್ಮಸಂಕಟಮಲ್ತೆ!

**ಭಗವಂತ**—ಅರ್ಜುನಾ ಆಲಿಸೈ— ಈತನು ಮಹಾಮಹಿಮ.
ಧರ್ಮವನ್ನಳಿಸುವಂ, ಉಳಿಸುವಂ ಇವನಲ್ತೆ;
ಅವನೊಳಿಗವ ಮಾಳ್ಪ ಹಕ್ಕು ಮಾತ್ರವೆ ನಿನಗೆ.
ಭಾರ್ಗವನ ದಯದಿಂದ ಸೂತಪುತ್ರನು ತಾನು
ಇಂದಜೇಯಂ ರಣದಿ; ಆದರಿನಿಂ ಧರ್ಮಜನ

ಕೌರವಗೆ ಕೆಡಹುವೆಂ ಎಂದವಂ ನುಡಿದಂತೆ
ನಡೆದುದೈ. ಕೌರವನ ಸೆರೆಯಿಂದ ಬಂದ ಧ-
ರ್ಮಜನೀಗ ಸಾವನೇ ಧಿಕ್ಕರಿಸಿ ನಿನ್ನ ಗಾಂ-
ಡೀವಕ್ಕೆ ತಪ್ಪಿದನು. ಮೂದಲಿಸುತಿಹೆ ನೀನು.
ಕ್ಷತ್ರಿಯಾದರು ಅವನು ಸುಮ್ಮನಿರುವನು ಕೇಳಿ.
ಅದೆ ಅವನ ಸಾವಧಾನದ ಮಹಿಮೆ. ಮಾತು ಮಡಿದುದು ಇಂತು.
ಹಿರಿಯನಂ ಜರೆದವಂ ತನ್ನ ತಾ ಕೊಂದಂತೆ,
ದುಡುಕಿ ಮಡಿದುದು ನಿನ್ನ ಪೌರುಷವು. ನಿನ್ನಘವ
ಪರಿಹರಿಸು. ಶಸ್ತ್ರಗಳ ಬಿಸುಟೀಗ ಅವನ ಕಾ-
ಲಿಗೆ ಮಣಿದು, ಭಾವನಾಮಯ ಭ್ರಮೆಯ ಕಳೆದಿಂದು
ಸುವಿಚಾರವಂ ಕೊಳ್ಳು--

**ಅರ್ಜುನ**—ಅಸ್ತು! ನಿನ್ನಾಜ್ಞೆಗಾಂ ಶರಣೆಂದು ವರ್ತಿಪೆನು.

■■■■■■■■

# ಶಕ್ತಿಪ್ರದರ್ಶನ

## ದೃಶ್ಯ ೩.

ಕುರುಕುಲೇಂದ್ರನ ಪಾಳಯವು ಸೈನಿಕರಿಂದ ಕಿಕ್ಕಿರಿದುಹೋಗಿದೆ. ಅತಿರಥರು, ಮಹಾರಥರು, ಷಡ್ರಥರೇ ಮೊದಲಾದ ವೀರಾಗ್ರಣಿಗಳು ನೆರೆದಿದ್ದಾರೆ. ಪ್ರತಿಯೊಬ್ಬನೂ ಭಯಚ್ಚಕಿತನಾಗಿ ಗೊತ್ತುಗುರಿಯಿಲ್ಲದವನಂತೆ ಅತ್ತಿತ್ತ ಸುಳಿಯುತ್ತಿದ್ದಾನೆ. ಕಾಲ್ಮುರಿದ, ಕೈಮುರಿದ, ಹಲ್ಮುರಿದ ಅಸಂಖ್ಯಾತ ಯೋಧರು, ಅಲ್ಲಲ್ಲಿ ಬಿದ್ದಿರುತ್ತಾರೆ. ಅವರ ಆರ್ತನಾದದ ಕೂಗುಗಳಿಂದ ಪಾಳಯವು ತುಂಬಿರಲು, ಒಬ್ಬರ ಮಾತಿನ್ನೊಬ್ಬರಿಗೆ ಕೇಳಿಸದಂತಿರುವಾಗ, ಕೌರವನು ಪ್ರವೇಶಿಸುವನು. ಎಲ್ಲರೂ ಶಿರಬಾಗಿ ನಿಲ್ಲುವರು.

**ಕೌರವ**—ಏನಿದೀ ವಿಪರೀತ! ಗುರುಪುತ್ರನೆಲ್ಲಿಹನು?

ಗುರುಪುತ್ರನಾದ ಅಶ್ವತ್ಥಾಮನು ಜನಸ್ತೋಮದೆಡೆಯಿಂದ ಧಾವಿಸಿ ಬಂದು ಕುರುಕುಲೇಶನಿಗೆ ವಂದಿಸಿ ನುಡಿಯುತ್ತಾನೆ.

**ಅಶ್ವತ್ಥಾಮ**—ಪ್ರಭುವರನೆ! ಅಪ್ಪಣೆ ನಿರೀಕ್ಷಣೆಯೊಳಾನಿಹೆಂ;
ನಿನ್ನನಿಸು ಕಾಣದೀ ಕಂಗಳುರೆ ಕುಣಿದಾಡುತಿರ್ದುವೈ!

**ಕೌರವ**—ವೀರಾತ್ಮ! ಬಾ ನಿನ್ನ ತಬ್ಬುವೆನು! ಕಂಡೆಯಾ
ನಮ್ಮವರು ಕಂಗೆಟ್ಟ ಪರಿಸ್ಥಿತಿಯ! ಅವನತಿಯಿ-
ದೇಂ ಬಂತೊ ನಮ್ಮ ರಾಜ್ಯಕೆ! ಇಂದಿನಾಹವದಿ
ಭೀಮನೋ ಭೈರವನೊ ಬಂದೆಮ್ಮ ಪಾಳಯುವ
ನುಚ್ಚು ನೂರಾಗಿಸಿದ! ಸೈನಿಕವು ದಿಕ್ಕು ಪಾ-
ಲ್ಕೈ! ನಿನ್ನ ಕಾಂಬ ತವಕದಿ ಬಂದೆನೊದಗಿದೆಯು?
ಮನದಳುಕು ಮರೆಯಾಗಿ ನಿನ್ನ ಕಂಡಿಹ ಸೊಗವು
ಶಕ್ತಿಯುತವೆನಿಸಿತ್ತೈ; ಸೋಲ ಕತ್ತಲೆ ಕವಿದು
ದಿಕ್ಕುಗಾಣದ ಮನಕೆ ಬೆಳಕಾದೆ.

**ಅಶ್ವತ್ಥಾಮ**—ಏಕಿಂತು ಭಯಗೊಳುವೆ! ಕೌರವಾ, ನಿನ್ನಾಜ್ಞೆ-
ಯಾದೊಡಾಂ ಕ್ಷಣದೊಳಗೆ ನಡೆಯಿಪೆನು.

**ಕೌರವ**— ಏನು ನಡೆಯಿಪೆಯೊ! ಕಡುಧೈರ್ಯವನ್ನುಸುರಿದಾ
ಗುರುವಳಿದ! ಛಲದಂಕ ಭೀಷ್ಮನೇಂ ಕಡಿಮೆಯೇ?
ಸರಳಮಂಚವನೆಸೆದ! ಇನ್ನಾರು ಗತಿಯಿಹರು!
ಈ ಧರೆಯ ವೀರಾತ್ಮರೆಮ್ಮವರು ಮಡಿದಿಹರು!
ನಂಬಿದೆನು. ಎಲ್ಲರಂ ನಂಬಿದೆನು! ಅಂದಿನಿಂ-
ದಿದು ತನಕ ನಂಬಿಯೇ ಕೆಟ್ಟೆನಾಂ; ನಮಗಿಹರು
ಇಚ್ಛಾಮರಣಿ, ಚಿರಂಜೀವಿಗಳು! ಧರೆಯಾಣ್ಮ-
ರೆಲ್ಲವರು, ನಮ್ಮ ಪಕ್ಷವನಾಂತು, ಪಾಂಡವರ
ಪೊರೆದರ್ಕೆ! ಇದು ರಾಜದ್ರೋಹವೆಂದಾಗದೇಂ?

**ಅಶ್ವತ್ಥಾಮ**— ಅಳಿದವರ ಮೇಲೊಂದು ದ್ರೋಹಮಂ ಸ್ಥಾಪಿಸುವ
ನಿನ್ನ ಬಲ್ಮೆಯಿದೇನು, ಕೌರವಾ? ಕಳೆದ ಮರ-
ವೆಯೊಳಿಂದು ಹೊಸತನಾರಿಸು. ಎನ್ನ ಶಸ್ತ್ರ ಸಂ-
ಚಯದಲ್ಲಿ ಅತಿಗೂಢಶಕ್ತಿಯಿದೆ. ಕೊನೆಗೆಲ್ಲ-
ರಂ ಗೆಲ್ದು ಈ ಜಗದಿ ವಿಜಯಿಯೆನಿಸುವೆ ನಿನ್ನ.

**ಕೌರವ**— ಇನ್ನೆಲ್ಲಿಯಾ ಕೊನೆಯು! ಭೀಮನೆಲ್ಲವನಿಂದೆ
ಕೊನೆಗೊಳಿಸುವಂ. ನೀನು ನಿನ್ನ ಶಕ್ತಿಯನಮೋ-
ಘವು ಎಂದು ಬಚ್ಚಿಡುವೆಯೇಕದನು!

**ಅಶ್ವತ್ಥಾಮ**— ಸರ್ವ ನಾಶದ ಶಕ್ತಿ ನಾನೆಸೆದೊಡಾ ಭೀಮ
ಬದುಕಿ ಬಂದರೆ ಚಿತ್ತಭ್ರಮಣೆಯಲಿ ಸಿಕ್ಕಸಿ-
ಕ್ಕವರನ್ನು ತಿಂದು ತೇಗುವನವನು! ಮಾನವತೆ-
ಯುಳಿಯದೇಂ?

**ಕೌರವ**— ಅಗಲದುವೇ ಬರಲಿ! ಮುತ್ತಪ್ಪ ಬವಣೆಗಳ
ಬೆದರಿಕೆಗೆ, ಬಂದು ನಿಂತಿಹ ಸಾವನೊಪ್ಪುವುದೆ!
ಮೊದಲು ಭೀಮನನಳಿಸು; ನಾವುಳಿವ ಹದನವನು
ಮತ್ತೆ ಯೋಚಿಸಿಕೊಂಬೆ.

**ಅಶ್ವತ್ಥಾಮ**—ದುಶ್ಶಾಸನಾದಿ ಪಟುಭಟರೆಲ್ಲ ರಣರಂಗ-
ದೊಳಗಿಹರು; ಕಾದಲಸಮರ್ಥರೇಂ? ನನ್ನಸ್ತ್ರ
'ವಡಬಾನ'ಲವನೆಸೆಯಬೇಕೇನು? ಅಳಿವನುಳ-
ವನು ನಿತ್ಯ ನಿರ್ಧರಿಪ ದೈವಿಕತೆಯಾ ವಿಶ್ವ-
ಧರಗಲ್ಲದೆಮಗೇನು ಶಕ್ತಿಯಿದೆ? ಶಕ್ತಿಯು-
ನ್ನುಳಿಸಿಕೊಂಬುದೆ ಶಕ್ತಿ. ಅಳಿವಿನೊಳಗೇನಿಹುದು
ಶಕ್ತಿ? ಜಗದುಳವಲ್ಲವೇ ನಲಿವು! ನಲಿವಿನೊಳ-
ಗಿಹುದೆಲ್ಲ ಚೆಲುವೆಂಬೆ.

**ಕೌರವ**—ಯುದ್ಧದೊಳಗೆಲ್ಲವೂ ಸೊಬಗಹುದು. ದೇವಗೀ-
ವನ ತರ್ಕ ತರಹರಿಸದೆಮ್ಮಳವ. ಈ ರೀತಿ
ಸುಮ್ಮನಿರಲೆಮ್ಮ ಹಂಚಿಕೆಯೆಂತು ಫಲಿಸಬಹು-
ದೈ ನೋಡು, ಗುರುಪುತ್ರ.

**ಅಶ್ವತ್ಥಾಮ**—ಏನು ಹಂಚಿಕೆ ನಿನ್ನದೇನು ಛಲವೋ ತಿಳಿಯೆ.
ಇನ್ನಾದರೀ ಯುದ್ಧ ನಿಲಿಸಬಹುದೈ ನಿನಗೆ.
ನಿನ್ನವರೆ ಪಾಂಡವರು. ಅವರ ಕೂಡುತ ಸುಖದ
ಶಾಂತಿಯೆಸಗಿದ ಸಮಯ, ನಿನ್ನ ಕೀರ್ತಿಯ ಭಿತ್ತಿ
ಬಾನ ಗುರಿಯಂ ಮೀರಿ ನಿಲ್ಲದೇಂ? ನಿನ್ನತುಳ
ಸೌಹಾರ್ದ ಹೃದಯತೆಯ ನಚ್ಚಿ ಮೆಚ್ಚುತ ಬಂದು
ಭುವಿಯ ಸಂಭ್ರಮವಾಂತು ಮೆರೆವೊಂದು ಜಯಶ್ರೀಯು,
ಸುಖವಲ್ಲವೇ ನಮಗೆ! ನೋಡು,—ನಲ್ಮೆಯ ಕಣ್ಣ
ತೆರೆದು ತಿರೆಯನು; ನಿನ್ನ ಮನದೊಳಲೆಯುವ ದುಷ್ಟ
ಶಕ್ತಿಗಳ ಗೆಲ್ದೊಮ್ಮೆ—ನೋಡು,—ಸರ್ವರ ನೇಹ-
ವೆರಸಿ ನಮ್ಮವರೆಂದು ತಿಳಿದು ತಾಳುತಲೊಮ್ಮೆ!
ನೋಡು ನೋಡೈ ಇಂದೆ; ನಲಿದೊಲಿದು ಬರುವರೈ.
ನೋಡು ನೆಮ್ಮದಿ ನಮಗೆ, ಎಲ್ಲರಿಗೆ, ಬರುವುದನು—
ಸುಖವೆಂಬ ಬಗೆಯನ್ನು.

**ಕೌರವ**—(ನಿರುತ್ತರ)

**ಅಶ್ವತ್ಥಾಮ**—ಆವುದೀ ಧರೆಯಲ್ಲಿ ಶಾಶ್ವತವು ನೋಡಯ್ಯ.
ನರನ ಬಾಳ್ಕೆಯೊಳೊಳಿತು ಕೆಟ್ಟದಲ್ಲದೆ! ಬಾಳು
ಮುಗಿವನಕ ಮುದಗೊಂಡು, ಬದುಕಿ ಬದುಕಿಸಿಕೊಂಡು,
ಎಲ್ಲರೇಳ್ಗೆಯ ನೋಡಿ ಎಲ್ಲರಂತೊಂದು ದಿನ
ನಡೆವುದಲ್ಲವೆ ಸುಖವು! ನಿಲುವುದಲ್ಲವೆ ಹೆಸರು!!

**ಕೌರವ**—ಪಾಂಡವರನುಳಿಸಿ ಮೆರೆಸುವ ನಿನ್ನ ಹಂಬಲವು
ಹರಿದೆದೆಯೊಳಿಂತು ಮಾತುಗಳಾದುವೇಂ? ತಿಳಿಯೆ,
ಗುರುಪುತ್ರ, ಭೀಮ ಸಾಹಸದಳುಕು ನಿನ್ನೆದೆಯ
ತೂರಿ ಮುಂಗಾಣದಿರೆ ಶಾಂತಿ ಕರೆಯೇ ಇನಿತು!
ನಿನಗೆ ಸರಿಯೇನಿದುವು?

**ಅಶ್ವತ್ಥಾಮ**—ನಿನ್ನಾಸೆಗಡ್ಡೈಸಿ ಬರಲೆಂತು! ನಿನಗೆ ನಾ-
ವನ್ಯರೇನಲ್ಲವೈ.

(ಎಂದಿಬ್ಬರೂ ಕುರುಕ್ಷೇತ್ರಕಭಿಮುಖವಾಗಿ ಹೊರಟು ಹೋಗುವರು.)

........

## ದೃಶ್ಯ ೪

ಧರ್ಮಕ್ಷೇತ್ರವೆಂದೆನಿಸಿದ ಕುರುಕ್ಷೇತ್ರದ ವಿಶಾಲ ರಣಭೂಮಿ. ಭೀಮ ಸಾಹಸದಿಂದ ಕೋಲಾಹಲಮಯವಾದ ಸಮಗ್ರ ಕುರುಕ್ಷೇತ್ರದಲ್ಲಿ ಯುದ್ಧೋನ್ಮತ್ತ ಸೈನಿಕರ ರಣಕಹಳೆ ಒಮ್ಮೆಂದೊಮ್ಮೆಲೇ ನಿಂತುಹೋಗಿದೆ! ಶಸ್ತ್ರಾಸ್ತ್ರ ಸುಸಜ್ಜಿತವಾದ ಸೇನಾಃಶರಥಿಯ ಮೇಲೆ ಯುದ್ಧಾತುರತೆಯ ಆದಾವ ತೆರೆಯೂ ಇಲ್ಲವೆಂಬಂತೆ ನಿಸ್ತಬ್ಧವಾಗಿದೆ. ಹಲವು ಯೋಜನ ಪರಿಯಂತ ಕೆಲಬಲದಲ್ಲಿ ನಿಂತು ಹೋರಾಡುತ್ತಿದ್ದ ಸೈನಿಕ ನಿಚಯವೊಂದೂ ಕಾಣದಾಗಿ, ನಿರ್ವಾತ ಭೀಕರತೆಯು ತುಂಬಿಹೋಗಿದೆ. ಕುರುಕ್ಷೇತ್ರದ ಒಂದೆಡೆಯಿಂದ ದೂರದಲ್ಲಿ ಕೃಷ್ಣಾರ್ಜುನರು ರಥಾರೋಹಿಗಳಾಗಿ ಪ್ರವೇಶಿಸುತ್ತಾರೆ. ರಣಭೂಮಿಯು ನೀರವ-ನಿಶ್ಶಬ್ದ ನಿಸ್ಪಂದವಾಗಿದ್ದು ಅವರಿದಿರಿನಲ್ಲಿ ಭೂವ್ಯೋಮಗಳು ಒಂದಾಗಿದ್ದಂತೆ ಅಗ್ನಿಮಯವಾದುದನ್ನು ನೋಡಿ ಭಯಗೊಳ್ಳುತ್ತಾನೆ ಅರ್ಜುನನು. ಪರಮಾತ್ಮನು ಅರ್ಜುನನ ಸ್ಥಿತಿಯನ್ನು ಕಂಡು ಕನಿಕರಪಡುತ್ತಾನೆ.

**ಕೃಷ್ಣ**—ಅರಯ್ಯ! ಅರ್ಜುನಾ, ಏಂ ಬೆರಗುಗೊಂಡಿರುವೆ?

**ಅರ್ಜುನ**—ದೇವ! ನಮ್ಮಿದಿರಿನಲಿ ಕಾಣುತಿಹುದೇನದುವು!
ವಹ್ನಿ ಪರದೆಯದೊಂದು ಭೂಮಿಯಿಂದಾಕಾಶ-
ಪರಿಯಂತ ಮುಚ್ಚಿಹುದು! ಮುಂಗಾಣೆ!! ಎನ್ನಕ್ಷಿ-
ಗಾವುದೂ ತೋರದಿದೆ, ವಹ್ನಿ ಜ್ವಾಲೆಗಳಷ್ಟೆ!!!

**ಕೃಷ್ಣ**:—ಮಂತ್ರಾಸ್ತ್ರ ಮಹಿಮನಶ್ವತ್ಥಾಮ ದುಡುಕಿದನು.
ವಡಬಾನಲದ ಶಕ್ತಿಯಂ ಪ್ರಯೋಗಿಸಿದನಲ್ಲಿ
ಸರ್ವನಾಶವನೆಸಗೆ; ಭಯಗೊಳ್ಳದಿರು; ಭೀಮ-
ನಿಂದೀಶನಹ. ಈಶನಿತ್ತಿರುವ ಶಕ್ತಿಯನು
ಅವನಿದಿರು ದುರುಪಯೋಗಿಸೆ ತಾನೆ ಭುಂಜಿಸಿದ.
ಮತ್ತವನೊಳುಳಿಯದದು. ಆ ಮಹಾಶಕ್ತಿಯಿಂ
ವಹ್ನಿ ಜ್ವಾಲೆಗಳೇಳೆ ರುದ್ರಭೀಮನದಾಗಿ
ಕುರುಕುಲವು ಕಂಗೆಡಲು ಗುರಿಯಿಲ್ಲದಂತಹುದು.
ಬಹುಕಾಲ ಕಷ್ಟದಿಂ ಬೆಂದ ಜನತೆಯು ಮತ್ತೆ
ಭೀಕರತೆಯಾವೇಶ ಶಕ್ತಿಯನು ಪಡೆವಂತೆ

ಬಲಗೊಂಡು, ಧರೆಯನೀ ನಡುಗಿಪೊಲು,
ಭೀಮತಾ ಭೀಮಶಕ್ತಿಯನಾಂತು ನಿಂತಿಹನು.

**ಅರ್ಜುನ**—ಮತ್ತೇನು?

**ಕೃಷ್ಣ**—ಆ ಶಕ್ತಿ ಭೀಮನೊಳು ಕ್ಷಣಮಾತ್ರವಿದ್ದು ಬಳಿ-
ಕೀಶನೊಳು ಐಕ್ಯವಾಹುದು; ವಿಶ್ವಶಕ್ತಿ ಸಂ-
ಪೂರ್ಣತೆಯನಾಂತಿಹುದು, ರೂಪಾಂತರಿಸಿ ಬಹುದು.
ಅಳಿವಿನಿಂದಳಿವಹುದು ಬೆಳೆಯಿಂದ ಬೆಳೆಬಹುದು.
ಅಳಿವೊ ಉಳಿವೋ, ಬೀಜ ಬಿತ್ತಿದೊಲು ಫಲವಿಹುದು.
ಬೆಳೆವ ಲಕ್ಷಣದಿಳೆಯೊಳುತ್ತ ರೀತಿಯ ಬೆಳೆಯು.
ಪ್ರಕೃತಿ ಲಕ್ಷಣ ಮೀರಲಾರಿಂದಲಸದಳವು.

**ಅರ್ಜುನ**—ಸಚರಾಚರವನುಳಿಸಿ ಸಲಹುವಾ ದೇವ, ನಿ-
ನ್ನಭಿಮತವದೇಂ ದಿವ್ಯತರವಹುದು! ನುಡಿವೆನೇಂ!!

**ಕೃಷ್ಣ**—ಕೌರವನ ಕಾಠಿಣ್ಯ ಕರಗದೀ ಜಗವೊಲಿದು
ನಲಿಯದೈ. ಅದರಿನೀ ಧರ್ಮಜನ ಸೋಲೊದಗಿ
ನೆಪಮಾಯ್ತು. ಸೋಲ ಶಕ್ತಿಯೆ ರುದ್ರಭೀಮ ಶ-
ಶಕ್ತಿಯದೆನಿಸೆ ಕುರುಭೂಪ ತಾನೆ ತನ್ನವನತಿಯ
ಕೊಂಡನೈ. ಅವನತಿಯನರಿತವರ ಪರಿಯ ತಿ-
ದ್ದುವ ಬುದ್ಧಿಯೇಳ್ಗೆಯಪ್ಪುದೆ ಹೊರತು, ಮತ್ತು ತ-
ಪ್ಪಿದನಾಗೆ, ಕ್ಷೀಣಗತಿಯೈದುವನು. ಕೌರವನ
ದೊರೆತನವು, ಶಾಂತಿಮಾರ್ಗವನುಳಿದು, ಮಿಕ್ಕವರ
ಸ್ವಾತಂತ್ರ್ಯಕೆಡರಾಗಿ ಬಂದಿಹುದು. ಪರರನಡಿ-
ಮೆಟ್ಟಿ ಬಸವಳಿಸಿ ಕೊಲಿಸುವ ಅವನ ಧೋರಣೆಯೆ
ಯುದ್ಧವೆಬ್ಬಿಸಲಿಂತು, ಭೀಮಶಕ್ತಿಯೆ ಬಂತು
ಇದಿರಾಗಿ. ವಿರುತ ಕಷ್ಟವನುಂಡ ಬಾಳ ಮೇ
ರೆಯೆ ಸಿಡಿದು, ಶಕ್ತಿಯೆನಿಪುದು ಜಗದಿ—ಕೆಣಕಲದ.
ನೆರೆಕರೆಯು ಕಷ್ಟಗೊಳೆ ತನ್ನ ಸುಖ ಸುಖವಲ್ಲ.
ಕೌರವನ ನೀತಿ ಸುಖಕರವಲ್ಲ. ತನ್ನ ಸುಖ

ವನ್ಯರಲಿ ಮೂಡಿ ಬಂದುಭಯಕುಲದುನ್ನತಿಯು
ಗೈವ ಸುಖ, ನಿಜಸುಖವದೆನ್ನಿಪುದು.

**ಅರ್ಜುನ**— ಭೀಮನೇಕಾಂಗಿಯುಹ. ನಾನವನ ಬಳಿಸಾರ್ದು
ನೆರವಾಗ ಬೇಡವೇಂ? ತಡವೇಕೆ ನಡೆಸು ರಥ-
ವನು ಅತ್ತ.

**ಕೃಷ್ಣ**—ಏಂ ಮೌಢ್ಯ! ಅರ್ಜುನಾ, ದುಡುಕದಿರು. ಸಾವಧಾ-
ನದ ಬಾಳ್ಕೆ, ಸೂಕ್ಷ್ಮಬುದ್ಧಿಯು ತಳ್ಕೆ, ಸುವಿಚಾರ-
ಮಾರ್ಗದಲಿ ಬೆಳಕಾಗಿ ಮೊಳಗುವುದು. ಭೀಮನೇಂ
ಸಾಮಾನ್ಯನೇ? ಆರ ನೆರವನ್ನು ಬೇಡದಾ
ಭೀಮ ವಿಕ್ರಮನಾತ, ವಾಯುಸಂಭೂತನಹ!
ಆರಾರ ರಕ್ಷಣೆಯುಸಾರಾರ ಬಗೆಯನ್ನು
ಬಯಸದಿಹ ಭೀಮನಂ, ರುದ್ರಭೀಮನನಿಲ್ಲಿ
ನೋಡಯ್ಯ, ನೋಡವನ. ಕಷ್ಟಸುಖವೆಂದೆನದೆ
ಸತ್ವಸಾಹಸದಿಂದ ಭೀಮನೆನಿಸಿದನಾತ.
ತನುಮನೋವಾಕ್ಕಾಯ ಕರ್ಮದಲಿ ಸಮನಾತ.
ರುದ್ರ ಭೀಕರನೆಷ್ಟೊ ತಾನೆಂಬ ಭದ್ರ ಶ್ರೀ-
ಕರನಷ್ಟೆ! ಭಯಗೊಳದೆ ನಿಂದಿಲ್ಲಿ ನೋಡವನ.
ಭೀಕರಾಕೃತಿಯಾಗಿ ರುದ್ರಶಕ್ತಿಯನುಂಡು
ರುದ್ರಭೀಕರನಾದ, ರುದ್ರಭೀಮನ ನೋಡು.

ಎಂದು ಕೃಷ್ಣಾರ್ಜುನರು ಸಾಕ್ಷಾತ್ ರುದ್ರರೂಪನಾದ ಭೀಮನನ್ನು ದೂರದಿಂದಲೇ ನಿಷ್ಪಕ್ಷ ಧೋರಣೆಯಾಂತು ನೋಡುತ್ತಾರೆ

**ಕೃಷ್ಣ**—ತಡವಾಗದಿಲ್ಲಿಂದ ಕರ್ಣನಿದಿರಿಗೆ ರಥವ
ಹಾರಿಸುವೆನೀಗಲಾಂ,

ಎನ್ನುವಾಗ ಧರ್ಮಕ್ಷೇತ್ರದಲ್ಲಿ ಪಾರ್ಥಸಾರಥಿಯ ದಿವ್ಯರಥವು ಮುನ್ನೆಗೆದು ಚಲಿಸತೊಡಗಿತು. ಸ್ವತಂತ್ರಧೋರಣೆಯ ಶ್ರೀಕೃಷ್ಣನು ಧನುರ್ಧಾರಿಯಾದ ಅರ್ಜುನನೊಡನೆ ಧರ್ಮಸಂಸ್ಥಾಪನಾಕಾರ್ಯದ ನ್ಯಾಯಪರಿಪಾಲನೆಗೆ ಬೇಕಾದ ವಿವೇಕ ಸೂಚನೆಯನ್ನಿತ್ತನು.

■■■■■■■■■

# ಹಿಂಸೆಯ ಸೋಲು

## ದೃಶ್ಯ ೫

ಧರ್ಮಸಂಸ್ಥಾಪನಾಕಾರ್ಯ ನಿಮಿತ್ತನಾದ ಭಗವಾನ್ ಶ್ರೀಕೃಷ್ಣನ ನೇತೃತ್ವದಲ್ಲಿ ಹದಿನೆಂಟನೇ ದಿನದ ಭಾರತ ಯುದ್ಧವು ಕಳೆದುಹೋಗಿದೆ. ಕೊನೆಯ ವರೆಗೂ ತನ್ನ ಛಲವನ್ನು ಬಿಡದ ಕೌರವನು ಬಂಧು ಬಾಂಧವ ಇಷ್ಟಮಿತ್ರರ ವಿಯೋಗದ ದುಃಖವನ್ನು ಎದೆಯೊಳಗೆ ತುಂಬಿಕೊಂಡು ದುಃಶಕ್ತಿಗಳೆಲ್ಲವನ್ನೂ ಕುರುಕ್ಷೇತ್ರದಲ್ಲಿ ಕೊನೆಗಾಣಿಸುವುದಕ್ಕೆ ಕಾರಣೀಭೂತನಾಗಿ, ಕಟ್ಟಕಡೆಗೆ ತಾನೂ ಅವರ ಹಾದಿಯನ್ನು ಹಿಡಿದಿದ್ದಾನೆ. ಕದನದ ಮಾತೊಂದು ಹೊರತು, ಇತರ ಶಬ್ದವೇ ಕೇಳಿಸದ ಕುರುಕ್ಷೇತ್ರದಲ್ಲಿ, ನಿಸ್ತಬ್ಧವಾದ ಭೀಕರತೆಯು ವ್ಯಾಪಿಸಿತ್ತು. ಭೂಶಾಯಿಯಾಗಿದ್ದ ಕೌರವನು, ತನ್ನಂಗಾಂಗಗಳು ಬದುಕುವ ಆಸೆಯನ್ನು ಕಳೆದಿದ್ದರೂ, ಮನಸ್ಸಿನಲ್ಲಿ ಮಾತ್ರ ತನ್ನಾಸೆಯನ್ನು ತೊರೆಯದೆ, ಜೀವಧಾರಣೆಮಾಡಿಕೊಂಡಿದ್ದಾನೆ. ಗಾಢಾಂಧಕಾರದಲ್ಲಿ ಮಡಿದ, ಮಡಿವ, ಮನುಷ್ಯರ ದೃಶ್ಯವೊಂದು ಹೊರತು ಅವನ ದೃಷ್ಟಿಗೆ ಬೇರೇನೂ ಕಾಣಿಸದಾಗಿದೆ. ಆಗ ಅಶ್ವತ್ಥಾಮನು ಪ್ರವೇಶಿಸುತ್ತಾನೆ.

**ಅಶ್ವತ್ಥಾಮ**—ತೊರೆದೆಯಲ್ಲವೆ ಜಗವನೆಮಗೆ ದಾರಿಯನಿಡದೆ.
ಕೊನೆಯ ಕಾಲಕೆ ಎನ್ನ ಕಾಂಬ ಕರುಣೆಯನಾಂತ
ಮಹಿಮನಸುವನು ಪಿಡಿದೆ! ನನಗೇನು ಅಪ್ಪಣೆಯು?

**ಕೌರವ**—ಆರಯ್ಯ ಗುರುಪುತ್ರ! ಬಂದೆಯಾ! ಸಾವ ಮು-
ನ್ನವೆ ನನಗೆ ನಿನ್ನ ದರ್ಶನವೆನಿತೊ ಪುಣ್ಯವೆನಿ-
ಸಿತು ನೋಡೆ;—ಧರೆಯ ಕೊಡೆ ಪಾಂಡುತನಯರಿಗೆಂಬ
ಛಲದಿ ಕಟ್ಟಿದೆನಾಸೆ ಗೋಪುರವ, ಕುಸಿಯುತಿದೆ.
ಕೃಷ್ಣನೊಬ್ಬನ ಹೊರತು ಜಗವಿಡೀ ನನಗಿತ್ತು;
ಹಾಳ್ಪುದೆಲ್ಲವ ಮಾಡಿ ಮುಗಿಸಿದೆನು; ನನಗಿರದ
ಸೌಭಾಗ್ಯ ಪಾಂಡವರಿಗೇತಕ್ಕೆ! ನಡೆಸಿಕೊಡು-
ವೆಯ ಕೊನೆಯದೊಂದಾಸೆಯನು ನನಗೆ? -

ಅಶ್ವತ್ಥಾಮ—ನಿನಗಾಗಿ ಬಂದಿರುವೆ; ಬದುಕಿರುವೆ;
ನಿನಗಾಗಿ ಸಾಯಲಿರುವೆನು ದಿಟವು, ಆದರೇಂ!
ಬ್ರಹ್ಮನೇಕೋ ಚಿರಂಜೀವಿಯೆಂದಂ ಎನ್ನ;
ಹಲವಾಸೆಗಳ ನಿನಗೆ ನಡೆಸಿಕೊಡುವೆನು ಎಂದು
ನುಡಿದರಾಗದೆ, ನಿನ್ನ ಕೊನೆಯ ಕಾಣುವ ನನ್ನ
ಬಾಳದೇಂ ಸರಿಯೊ! ನೀ ಸುಖಿಯಾಗು; ಏನದೇಂ
ನಿನ್ನಾಸೆ?

ಕೌರವ—ನಡೆಸುವೆಯ!—ಪಾಂಡವರಿಗೀ ರಾಜ್ಯ ಕೊಡೆನೆಂದೆ;
ಅದನಿಂದು ಕೊಂಬರ್ರೈ! ಕೌರವನ ಮಾತು ಪುಸಿ-
ಯೆಂದಾಗದಂತೆ ನೀ ನಡೆಸಿದರೆ, ತೃಪ್ತಿಯಲಿ
ತಡವಿರದೆ ಪೋದಪೆನು. ಪಾಂಡವರನೆಂತಾದ-
ರಿಂದು ನೀನೆನ್ನೊಡನೆ ಕಳಿಸಿಕೊಡು; ಧರೆಯೆನ್ನ-
ದಿದು; ಮತ್ತವರ ನಾಳೆ ಬರುವ ಜನುಮದೊಳಾನೆ
ಸೋಲಿಸುತ್ತಾಳುವೆನು. ಅವರುಳಿದು ನಾನಳಿದ-
ರಿದು ಸಾಧ್ಯವಿಹುದೆಂತು? ಆದರಿನಿಂ ಈ ಮಾತ
ನಡೆಸಿಕೊಡು.

ಅಶ್ವತ್ಥಾಮ—ಸಾಯುವೊಂದರೆಕ್ಷಣಕೆ ಮೊದಲಾದರೀ ಧರೆಯ
ಮೇಲಣಾಸೆಯನುಳಿದು ಸುಖಿಸಯ್ಯ.

ಕೌರವ—ಧರೆಯನಾಸಿಸಿ ನುಡಿದೆನಲ್ಲ ನಾನಿದ ಕೇಳು!
ಧರೆಯ ವಿಸ್ತರಿಪಾಸೆಗಲ್ಲ ಯುದ್ಧವಗೈದೆ. ಬೇಡಿ ರಾ-
ಜ್ಯವ ಪಡೆದ ಪಾಂಡುತನಯರು ಮುನ್ನ ಆಳುವವ-
ರೆಂತಹರು? ಯೋಚಿಸೈ!

ಅಶ್ವತ್ಥಾಮ—ಇರಲೀಗ ಶೌರ್ಯಸಾಹಸದಿಂದಲೇ ಪಡೆದ-
ರಲ್ಲವೇಂ? ಇನ್ನಾದರವರಿರಲಿ, ಅವರದೇ
ರೀತಿಯಲಿ, ಅವರ ದೇಶವನಾಳಿ ಸುಖಿಸುತ್ತ.

ಕೌರವ— ಏಕಚಕ್ರಾಧಿಪತಿ ನಾನೆಂದ ನುಡಿ ನಡೆಯು-
ದಾಯ್ತು ಪುಸಿಯೆಂದೆನಿಸಲೆನ್ನ ಗೌರವವಿಳಿದು
ಚರಿತೆಯಲಿ ಕೊರತೆಯೆನಿಸದೆ ಯುಗಾಂತರ ತನಕ?
ಅದರಿನಿಂ ಪಾಂಡುತನಯರ ನನ್ನ ಕೂಡೆಯೇ
ಕಳಿಸಿಕೊಡು. ಮತ್ತೆ ನೀನೆನ್ನ ಪಂಥವ ಸಾರಿ
ಹಸ್ತಿನಾವತಿಯನ್ನು ಬೆಳಗಿಸುತ್ತಿರಬೇಕು.

ಅಶ್ವತ್ಥಾಮ—(ನಿರುತ್ತರ)

ಕೌರವ—ಅಂಜುತಿರುವೆಯ ಏನು! ನುಡಿದ ಮಾತಂ ನಡೆಸು!

ಅಶ್ವತ್ಥಾಮ— ಹೇ ಕೌರವಾ! ನಾನು ನಿನ್ನಗೋಸುಗ ಮಾಡ-
ಲಾಗದಾ ಕೆಲಸವನು ಮಾಡಲೊಪ್ಪದೆಯಿಲ್ಲ!
ಮಾಡಿಯೇ ಮಾಡುವೆನು; ಅಂಜಿಕೆಯ ಮಾತೆಲ್ಲಿ!
ಪರಮಾತ್ಮನಾದೊಡೇಂ! ಲೆಕ್ಕಿಸೆನು! ನಿನ್ನ ಕೊನೆ-
ಯಾಸೆಯನು ನಡೆಸುವೆನು. ಪಂಚಪಾಂಡವರನ್ನು
ಕೃಷ್ಣ ತನ್ನೈದು ಪ್ರಾಣಗಳಂತೆ ಬಚ್ಚಿಟ್ಟ-
ರವನನೇ ಸನ್ನಿದಿರು ತಂದು ಕೆಡಹುವೆನಯ್ಯ.

ಕೌರವ—ಗುರುಪುತ್ರ! ಕೃಷ್ಣ ಪಾಂಡವರನ್ನು ಉಳಿಸಲಿ-
ನ್ನೇಂ ಗೂಢತಂತ್ರವಂ ಕೊಂಡಿಹನೊ!

ಅಶ್ವತ್ಥಾಮ—ಬಿಡೆನವನ; ಅರೆಕ್ಷಣದಿ ಬರುವೆನಾಂ! ನಂಬು ನೀಂ!
ಬೀಳ್ಕೊಂಬೆ.

ಎಂದು ಕೌರವನ ಮನೋಭೀಷ್ಟವನ್ನು ಸಲಿಸುವ ಉದ್ವೇಗಯುಕ್ತವಾದ ಸ್ವಾಮಿನಿಷ್ಠೆಯಿಂದ ಕರ್ತವ್ಯತತ್ಪರತೆಯನ್ನು ಪೂರೈಸುವುದಕ್ಕಾಗಿ ಅಶ್ವತ್ಥಾಮನು ನಿಮಿಷಾರ್ಧದಲ್ಲಿ ಕುರುಕ್ಷೇತ್ರದ ಮೂಲೆ ಮುಸುಕುಗಳನ್ನು ಶೋಧಿಸಿದನು. ಎಲ್ಲಿಯೂ ಕೃಷ್ಣನನ್ನೂ ಪಾಂಡವರನ್ನೂ ಕಾಣದಾದನು. ರಣಭೂಮಿಯನ್ನು ಸುತ್ತಿ ಸುತ್ತಿ ಮುಂಗಾಣದೆ ಬೇಸತ್ತು ಮತ್ತೊಂದು ಕಡೆ ನಿಂತು,—

ಅಶ್ವತ್ಥಾಮ—(ಸ್ವಗತ)ಏನಿದೇಂ ಕೌತುಕವು! ಪಾಂಡುತನಯರ ಸುಳಿವೆ
ಸೂಚಿಸುವುದಿಲ್ಲ! ಮತ್ತೆಲ್ಲಿ ತಂಗಿಹರವರು!

ಕದನಪಟುಗಳ ಸುಂಗಿ ಸೊಕ್ಕಿದೀ ನಿಶೆಯೆದೆಯು
ಭೀಕರತೆಯಂ ಪೊಕ್ಕು ಬದುಕಿಕೊಳ್ಳಲು ಬಗೆದು
ಅಡಗಿಕೊಂಡಿಹರೇನು? ದೇಶದೇಶಗಳಿಂದ
ಬಂದವರು, ಕೌರವನ ಪೆಸರುಳಿಸೆ ಮಡಿದುಬಿ-
ದ್ದಿಹರಿಲ್ಲಿ! ನಿಷ್ಕರುಣೆ ನಿಶೆಯೇಕೆ ಬದುಕಿ ಕೊ-
ಳ್ಳಲು ಬೇಕು. ಅವಳೆದೆಯ ಸೀಳಿ, ಪಾಂಡವರನ್ನು
ತರಿದಪೆಂ! ತಡೆವರಾರ್! ದುಶ್ಶಕ್ತಿಗುಪಮೆಯೆನಿ-
ಪೀ ನಿಶೆಯು ಮುನ್ನ ರಾಜ್ಯದೊಳುಳಿಯಬಾರದೆನಿ-
ಸುವೆನೀಗ.

ಎಂದು ಸರ್ವ ವಿದ್ಯಾಪಾರಂಗತನಾದ ಅಶ್ವತ್ಥಾಮನ ಮೂರ್ಖತನವು ನಿಶಾದೇವಿಯ ನಿರ್ನಾಮದಿಂದ, ತನ್ನ ಕೋಪದ ಉಪಶಮನವನ್ನು ಬಯಸಿ, ಅವನು ತನ್ನ ಖಡ್ಗವನ್ನು ಝಳಪಿಸುವಾಗ, ಉಭಯ ಪಾರ್ಶ್ವಗಳಿಂದ, ಸರ್ವಾಲಂಕಾರಭೂಷಿತೆಯರಾಗಿ, ಜಯಲಕ್ಷ್ಮಿಯು ಪುಷ್ಪಹಾರವನ್ನೂ, ಭಾಗ್ಯಲಕ್ಷ್ಮಿಯು ಛತ್ರ ಚಾಮರವನ್ನೂ ಹಿಡಿದುಕೊಂಡು ಪ್ರವೇಶಿಸುವರು. ಅಶ್ವತ್ಥಾಮನನ್ನು ಕಂಡು, ನಮಸ್ಕರಿಸುವರು.

ಜಯಲಕ್ಷ್ಮಿ—ಬ್ರಹ್ಮಪುತ್ರಾ! ಪೂಜ್ಯ ನಿನಗೆನ್ನ ವಂದನೆಗಳು.

ಭಾಗ್ಯಲಕ್ಷ್ಮಿ—ವಂದನಂ, ದ್ರೋಣಾತ್ಮಜಾ, ನಿನಗೆ ವಂದನಂ.

ಅಶ್ವತ್ಥಾಮ—(ವಿಸ್ಮಿತನಾಗಿ) ನೀವಾರು!

ಜಯಲಕ್ಷ್ಮಿ—ನನ್ನ ನೀ ಮರೆತೆಯಾ?

ಅಶ್ವತ್ಥಾಮ—ಮರೆವೆನೆಂತೌ? ಕೈಯೊಳೇನಿದೀ ಪುಷ್ಪಹಾ-
ರಂ? ಈಕೆ, ಇವಳಾರು?

ಜಯಲಕ್ಷ್ಮಿ—ಇವಳ ನೀನರಿಯೆ? ಬರಲೊಲ್ಲದೀಕೆಯ ನಾನು
ನಿನ್ನೆಡೆಗೆ ಕರೆತಂದೆ! ಭಾಗ್ಯದೇವತೆಯೆಂಬ-
ರೀಕೆಯನು. ಜನಶಕ್ತಿ ಜನತೆಯೊಲವೆಂಬುದೀ-
ಕೆಯ ರೂಪ ಜನರೈಕ್ಯಮತ ಭೂಮಿ-
ಯುತ್ಪತ್ತಿಗಳೆ ಈಕೆಯುಜ್ಜುಗವು. ಈ ಹಾರ,

ಇದುವೆ ತಾ ಜಯಮಾಲೆ! ಈಕೆ ನಡೆದಾ ಮಾರ್ಗ-
ವೆನ್ನ ಬಟ್ಟೆಯು, ನೋಡೆ ನಿನ್ನೆಡೆಗೆ ಬರಲೊಲ್ಲ-
ದಾದರಾಂ ಕರೆತಂದೆ. ಅವಳ ಮನ್ನಿಸಿ ನುಡಿಸು.
ಪೂಜ್ಯಳೈ. ಈಕೆಯೆತ್ತಿದ ಕೊಡೆಯ ನೆಳಲನಾ-
ಸಿಸಿ ಬರುವ ಜನರೆಷ್ಟೊ ಮಂದಿಗಳು, ದೊರೆಯದಿದೆ.
ವಿಶ್ವಚಾಲಕನ ಪಥವೆಂತೊ ಆ ರೀತಿ ಈ
ನೆಳಲು ಚಲಿಸುತಿದೆ; ಸೆರೆ ಧರ್ಮದೃಷ್ಟಿಯನಾಂತು
ದಣಿದು ದುಡಿಯುವರೆಲ್ಲರಾಸಿಸುವರೀ ನೆಳಲ,
ಕೊಡಿಸುವಳು ಅವರವರ ಸುಕೃತಗಳ ತೂಗಿ ತುಲ-
ನೆಯ ಮಾಡಿ. ಸೊಕ್ಕಳಿದು ನೀ ದಣಿದು ಬಂದೆಯಾ-
ದರೆ ಪಡೆವೆ. ಸುಳ್ಳಲ್ಲ! ನೋಡು ನೀ.

ಅಶ್ವತ್ಥಾಮನು ಕೋಪಾತಿರೇಕದಿಂದ ತನ್ನ ಕೈಯ ಕಠಾರಿಯಿಂದ ಭಾಗ್ಯ ಲಕ್ಷ್ಮಿಯ ಛತ್ರವನ್ನು ತಿವಿಯುವನು. ಸುವರ್ಣರಂಜಿತ ಛತ್ರವು ಮುರಿದು ಬೀಳು ವುದು. ಆಕೆ ಭಯಚಕಿತಳಾಗಿ, ಓಡಿ, ಜಯಲಕ್ಷ್ಮಿಯನ್ನು ಹಿಡಿದುಕೊಳ್ಳುವಳು.

**ಜಯಲಕ್ಷ್ಮಿ**—(ಅಶ್ವತ್ಥಾಮನನ್ನು ತಡೆದು)
ಸರ್ವನಾಶವಗೈದೆ! ದುಡುಕೇನು ದ್ವಿಜವರಾ!
ಈಕೆಯೊಪ್ಪದ ನಿನ್ನ ಹರಿಯು ನಿಲದೈ; ವೃಥಾ
ದುಡುಕಿದೆಯ! ಕ್ಷಮೆಯ ಯಾಚಿಸು ಶೀಘ್ರ!

**ಅಶ್ವತ್ಥಾಮ**—ಏನೆಂದೆ? ಈಕೆಯೊಳು ಕ್ಷಮೆಯೆ! ಛೀ! ಸೊಕ್ಕಿದೀ-
ಕೆಯನಿಲ್ಲೆ ರಣಭೂಮಿಗರ್ಪಿಸುವೆ! ನೀ ಬಂದ
ಕಜ್ಜವೇನುಸುರದನು! ಏತಕೀ ಸುಮಹಾರ?

**ಜಯಲಕ್ಷ್ಮಿ**—ಸುಮಹಾರವೆಂದರಿತೆಯಾ ಇದನು? ಈ ಹಾರ-
ದಾಸೆಯಿಂ, ರಾಜರಾಜಾಧಿರಾಜರು ತಮ್ಮ
ಭೋಗ ಬೊಕ್ಕಸಗಳನು ತೊರೆದಳಿದು ಮಡಿವರೈ!
ಜೋಧನೊಬ್ಬನ ಖಡ್ಗಧಾರೆಗಾಹುತಿಯಾಗಿ
ಕೋಟಿ ಮಕುಟಗಳುರುಳಿ ಬೀಳುವುದೆ, ಈ ಹಾರ,—

ಇದಕಾಗಿ! ಕ್ಷಣಕ್ಷಣಕೆ ಬದಲಪ್ಪ ಹಾರವೀ
ಜಯುವಹಾಲೆ, ಈಕೆಯಿಚ್ಛೆಯೊಳೊಂದೆ ಕ್ಷಣಮಾತ್ರ-
ದಲಿ ತಿರುಕನರಸನಪ್ಪಂ, ಅರಸನಳಿಯುವಂ!
ಎನ್ನ ಹಾರದ ಮೈಮೆಯುತಿ ಗೂಢ ಚಾರಿತ್ರ!!

**ಅಶ್ವತ್ಥಾಮ**—ಮತ್ತೇನಗೈವುದೀ ಹಾರ ನಿನ್ನದು ಹೇಳು!

**ಜಯುಲಕ್ಷ್ಮಿ**—ಇವಳನೊಲಿಸಿದ ಬಾಳ ಕೊರಳಿಗೆನಿಪೀ ಹಾರ
ಬೇಕೆಂದರೊಲಿಯುದದು! ಅದರ ಹಜ್ಜೆಯು ಸುಳಿವ-
ನರಿಯಲೈದಿದ ಧೀರರೆಷ್ಟೊ ಮರಳದ ಇಹರು!
ಬಾನ ಪರಿಧಿಯು ಸುತ್ತಿ ಬಳಲಿ ಬಂದವರಿಹರು!
ಶರಧಿಯುಂತರವಳೆದು, ಸುರಿಸಿ ರಕ್ತವನೊಲಿಯು-
ದವರು ತಮ್ಮೊಳು ತಾವೆ, ತಿಳಿದುನೋಡಿದರಿದನು.
ಕೆಲರು ಮುಟ್ಟಲು ಬೆದರಿ, ಸರಿದು ನಿಂತರು; ಕೆಲರು
ತಮ್ಮತಮ್ಮೊಳು ಕದನ ಹೂಡಿ ಮಡಿದರು; ಮಿಕ್ಕ
ಕೆಲರುಪೇಕ್ಷಿಸಲವರ ಧರ್ಮನಿಷ್ಠೆಯು ಕೊರಳ-
ನೇರಿ ಮೆರೆಯಿತು ಹಾರ. ತಿಳಿದು ತಡೆಯುದ ಪರಿಯು
ಕಂಡುಕಾಣದ ಹಾರವೊಡಲಿನಕ್ಷಿಗೆ ವೇದ್ಯ!

**ಅಶ್ವತ್ಥಾಮ**—ಸಾಕು ತಡೆ! ನಿಲ್ಲಿಸೀ ಚರಿತೆಯುನು! ಈಗಲಿದು
ಎಲ್ಲಿರ್ದುದೀ ಹಾರ? ಆರ ಕೊರಳಿಂದೆಳೆದು
ತಂದಿರುವೆ?

**ಜಯುಲಕ್ಷ್ಮಿ**—ಕೌರವೇಂದ್ರನ ಕೊರಳ ಮೇಲಿರ್ದುದೀ ಹಾರ.

**ಅಶ್ವತ್ಥಾಮ**—ಕೌರವೇಂದ್ರನ ಕೊರಳ ಮೇಲಿರ್ದುದೇ ಹಾರ?

**ಜಯುಲಕ್ಷ್ಮಿ**—ಅಹುದಹುದು; ರಾಜಾಧಿರಾಜನಾತನ ಕೊರಳ
ಮೇಲಿರ್ದುದೀ ಹಾರ; ತಂದಿರುವೆ ನಾನದನು.

**ಅಶ್ವತ್ಥಾಮ**—ತಂದೆಯೇತಕೆ? ಬೇಗ ನುಡಿಯುದನು!

**ಜಯುಲಕ್ಷ್ಮಿ**—ಪರಮಾತ್ಮನಪ್ಪಣೆಯುು! ಈ ಹಾರವಿನ್ನು ಧ-
ರ್ಮಜನ ಕೊರಳಲ್ಲಿ ನಿಲುವುದಿದೆ.

ಅಶ್ವತ್ಥಾಮ—

ರೌದ್ರಾವತಾರದ ಉದ್ವೇಗದಿಂದ ಅತ್ಯಂತ ಕುಪಿತನಾಗಿ, ತನ್ನ ಕಠಾರಿಯಿಂದ ಹಾರವನ್ನು ಛಿನ್ನಛಿನ್ನವಾಗಿ ಹರಿದೆಸೆದು,—

—, ಸರಿಯಿರೀಗಲೆ ಧಿಟ್ಟೆಯರೆ, ಮಿಂಚಿನೊಲು, ನಮ್ಮ
ಕುರುಭೂಪನೆಡೆಗಾಗಿ! ಆತನಳಿದಿಲ್ಲ! ಪರ-
ಮಾತ್ಮನಂಕಿತವೆ? ಭ್ರಮೆಯುವಗೆ! ಕೌರವ ಭೂಪ
ಮಡಿವನ್ನೆಗವನ ನೀವೆಡೆಬಿಡದೆ, ಸೇವಿಸಿರಿ.
ಎನ್ನಾಜ್ಞೆ. ಮರುಕವಿಲ್ಲದ ನಿಮ್ಮ ಎದೆಯನೀ
ಕತ್ತಿಯಿಂದಿರಿವೆ ನಾಂ! ಭೋಗ ಭಾಗ್ಯಾಧಿಗಳು
ಮಾನವ್ಯತೆಯ ಪಾಶ! ತಡೆಯದೀಗಲೆ ತೆರಳಿ,
ರಣಭೂಮಿಯೊಳು ಮಲಗಿ ಎನ್ನ ಬರವನು ನೋಳ್ಪ
ರಾಜಾಧಿರಾಜನನು, ಸೇವಿಸುತ, ಆನು ಬರು-
ವನ್ನೆಗಂ ನಿಂದಿರಿ. ಜಯಾಪಜಯವನ್ನಾನು
ನಿರ್ಧರಿಪೆ! ಬರುವಾಗ, ಎನ್ನಕ್ಷಿಯಲಿ ನೀವು
ತೋರದಿರೆ, ಎಲ್ಲೆಡೆಯನರಸಿ, ನಿಮ್ಮನು ಹಿಡಿದು,
ಸುಡುವೆನಾಂ! ತಿಳಿದಿರಲಿ.

ಎಂದು ಗದರಿಸಲು, ಜಯಲಕ್ಷ್ಮಿ ಭಾಗ್ಯಲಕ್ಷ್ಮಿಯರು ಅಲ್ಲಿಂದೆದ್ದು "ಅಪ್ಪಣೆ" ಎಂದು ತೆರಳುವರು.

ಅಶ್ವತ್ಥಾಮ — (ಸ್ವಗತ) ಭ್ರಮೆಯಿದೇಂ ನನಗಿದುವು! ಮಡಿದುಬಿದ್ದವರೆಲ್ಲ
ಎದ್ದು ಬಂದಿಹರೇಕೆ? ಹದಿನೆಂಟು ದಿನದ ಮ-
ತ್ತೊಂದು ಭಾರತ ಯುದ್ಧವೆಸಗುವೆಂದಾಂ ಬಂದೆ-
ನೆಂದು ತಿಳಿದರೆ ಏನು! ಗುಲ್ಲೇನು! ರಣಕಹಳೆ
ಕೇಳುತಿದೆ!! ಪಿತ, ಕರ್ಣ, ಭೀಷ್ಮ, ದುಶ್ಯಾಸನರು
ಎಲ್ಲರೂ ಬಂದಿಹರು,—ಭ್ರಮೆಯಲ್ಲ! ಭ್ರಮೆಯಲ್ಲ!
ನನಗೆ ಪಟ್ಟವ ಕಟ್ಟದೊಂದು ಕೊರತೆಯ ಕಳೆದು
ನಾನೆ ಪಟ್ಟವನಾಂತು ಸಮರವೆಸಗುವೆನಿಂದು;
ಕೌರವಗೆ ಜಯಶ್ರೀಯ ತರಿಸಿಕೊಡುವೆನು ಜವದಿ;—

ಛೀ! ಇದೇಂ!! ಭ್ರಮೆಯಲ್ಲದೇಂ!! ಮಡಿದು ಬಿದ್ದವರು
ಮತ್ತೊಮ್ಮೆ ಬರಲಿಹರೆ! ಮೂಢತನವೆನಗಿದೇಂ!
ಸರ್ವರಾ ಸಾವೆಸಗಿ ಧರೆಗೊರಗಿ ಬಿದ್ದ ಕೌ-
ರವ ನನ್ನ ದಾರಿಗಾಣುತಲಿರ್ಪ ಸಮಯದಲಿ,
ಕಣ್ಗೆ ಕಾಣುವುದೆಲ್ಲ, ಇದು, ಭ್ರಮೆಯೆ; ಮಾಯಾವಿ
ಕೃಷ್ಣನೆರಚಿದ ಭ್ರಮೆಯು!

ಎನ್ನುವಾಗ ತನ್ನಿದಿರಿನಲ್ಲಿ ಭದ್ರಾಕಾರವಾಗಿ ಉನ್ನತಕ್ಕೆ ಬೆಳೆದು ನಿಂತ ಕೋಟೆಯೊಂದು ಅವನ ಕಣ್ಣಿಗೆ ಕಾಣಿಸಿಕೊಳ್ಳುತ್ತದೆ. ಅದರ ಮುಂಬಾಗಿಲೊಂದು ಭೂಮಿ ಅಂತರಿಕ್ಷಗಳನ್ನು ಜೋಡಿಸುವಂತಿದ್ದು ಅತ್ಯುನ್ನತವಾಗಿ ಗಭೀರವಾಗಿ ಕಾಣಿಸುತ್ತಿದೆ.

**ಅಶ್ವತ್ಥಾಮ**—ನೆಲನೊಡೆದು ಬಂದು ನಿಂತಿಹ ಕೋಟೆಯೊಂದಿಹುದು
ಸಮ್ಮುಖದಿ! ಭೂಮಿಯಿಂದಾಕಾಶ ಪರಿಯಂತ
ಬೆಳೆದಿಹುದು! ಭದ್ರವ್ಯೂಹವನಾರು ರಚಿಸಿಹರು!
ಬಲು ದೀರ್ಘವಾಗಿಹುದು! ಏತಕೀ ಕೋಟೆಯಿದು!
ಆರನುಳಿಸುವ ಕೋಟೆ! ಏನು ಮುಂಬಾಗಿಲಿದು!
ನೋಡೆ ನಿರ್ಭೀತ ಭೂತಾಕಾರದಂತೆ ನಿಂ-
ತಿಹುದಿಲ್ಲಿ! ಕಡು ಭಯಂಕರ ದೃಶ್ಯ! ಇವನಾರು!
ವ್ಯಕ್ತಿಯೊಂದೈತಹುದು! ಬಂದನಿದೊ! ಆರಿವಂ!

ಎನ್ನುತ್ತ ಭಯಗೊಂಡು ವಿಕಾರವಾಗಿ ಅರಚಿಕೊಳ್ಳುತ್ತಾನೆ. ಕೈಯಲ್ಲಿದ್ದ ಖಡ್ಗವು ತನ್ನಿಂದ ತಾನೇ ಕೆಳಗೆ ಬೀಳುವುದು. ನಿರಾಯುಧನಾದವನು ಮತ್ತೂ ಭಯಗೊಂಡು ಬುದ್ಧಿವಿಕಾರತೆಗೊಳ್ಳುತ್ತಾನೆ. ಕರಾಳ ಕಗ್ಗತ್ತಲೆಯಲ್ಲಿ ಬಂದ ವ್ಯಕ್ತಿಯು ಅವನಿದಿರು ಅಸ್ಪಷ್ಟವಾಗಿ ಕಾಣಿಸಿಕೊಳ್ಳುವಾಗ ಅಶ್ವತ್ಥಾಮನು ಭಯಂಕರ ಚೀತ್ಕಾರವನ್ನು ಮಾಡುತ್ತಾನೆ. ವ್ಯಕ್ತಿಯಾಗ ಸ್ಪಷ್ಟವಾಗಿ ಅವನಿದಿರು ಬಂದು ನಿಲ್ಲುತ್ತದೆ!

**ಅಶ್ವತ್ಥಾಮ**—(ತುಸು ಧೈರ್ಯ ತಾಳಿ)
ಆರು ನೀ? ಮಾನವ್ಯತೆಯು ಮುಗಿದು ಬಹುಹೊತ್ತು
ಕಳೆದಿಹುದು! ನೀ ಮನುಷನಾಗಿರಲಸಾಧ್ಯವಿದೆ!

**ವ್ಯಕ್ತಿ**—(ನಿರುತ್ತರ).

ಅಶ್ವತ್ಥಾಮನು ಸಂಪೂರ್ಣ ಉದ್ವೇಗದಿಂದ ಅರಚಿಕೊಳ್ಳುತ್ತಾನೆ. ವ್ಯಕ್ತಿಯು ಕದಲಲಿಲ್ಲ.

**ಅಶ್ವತ್ಥಾಮ**—ಆರು ನೀ? ಉತ್ತರಿಸದಿರೆ ನನ್ನ ಶಕ್ತಿಯಿಂ
ನಿನ್ನನೀಗಲೆ ಸುಡುವೆನಾಂ! ಬೇಗ ಬಾಯ್ದೆರೆದು
ಆರೆಂದು ಪೇಳೆನಗೆ!

**ವ್ಯಕ್ತಿ**—ಮರುಳ ನೀನ್ನೈ ದಿಟವು;

**ಅಶ್ವತ್ಥಾಮ**—ಮಾನವತೆಯುಳಿದ ಮೇಲಿನ್ನುಳಿದ ನೀನು ನೀ-
ನೇ ಮರುಳು!

**ವ್ಯಕ್ತಿ**—ಅರಿತವರನರಿತರಿತು ಮರೆತವನು ಮರುಳನ-
ಲ್ಲದೆ ಏನು! ಆದರಿನಿಂ ನುಡಿದೆನಾ!

**ಅಶ್ವತ್ಥಾಮ**—ಆರು ನೀ!

**ವ್ಯಕ್ತಿ**—ಗುರುತಿಸೈ!

**ಅಶ್ವತ್ಥಾಮ**—ಅಪರಿಚಿತ ನೀನೆನಗೆ.

**ವ್ಯಕ್ತಿ**—ಅದರಿನಿಂ ಇದೆ ಈಗ ನೀ ಮರುಳನಾಗಿರುವೆ.
ಆರನರಸುತಲಿರುವೆ ಈ ಮಧ್ಯರಾತ್ರಿಯಲಿ?
ಈಶಸೇವಕನಾದ ನಂದಿಯಾಗಿಹೆ ನಾನು!
ಚಿತ್ತಭ್ರಂಶತೆಯಿಂದ ನೀನೆನ್ನ ಗುರುತಿಸದೆ
ಇರ್ದಪೆಯ! ಇಂತೇಕೆ ಭ್ರಮೆಯಾಂತೆ! ಸುಳಿವೆಯೇ-
ತಕೆ ರಾತ್ರೆ—

**ಅಶ್ವತ್ಥಾಮ**—ಪಾಂಡವರನರಸುತಿಹೆ. ತಿಳಿಸಲಾಪೆಯ ಎನಗೆ?

ಕೌರವನಿಗಾಗಿ ರೌದ್ರಾವತಾರಿಯಾದ ಅಶ್ವತ್ಥಾಮನು ತನ್ನ ಕಾರ್ಯ ಸಾಧನೆಯನ್ನು ಬಿಡದಿರುವುದನ್ನು ಕಂಡು,—

**ನಂದಿ**—(ಸ್ವ) ಈತನೀಗಲೆ ಭ್ರಮಿಸಿ ಮರುಳನಾದಂ ದಿಟವು;
ಆದರಾತನ ಭ್ರಮೆಯ ಮೊದಲಯೋಚನೆಯೊಂದೆ

ಉಳಿದು ನಿಂತಿದೆಯದನು ಮಾಡದೆಂದೂ ಬಿಡದ
ಶಕ್ತನೀತಂ, ಮೇಲೆ ಮರುಳುಗೊಂಡಿಹನೀಗ;
ಇನ್ನಿವಂ ಸರ್ವನಾಶವನೆಸಗದಿರ್ಪನೇಂ!
(ಪ್ರ) ನೀ ತೆರಳಿ ಪೋಗಯ್ಯ,— ಪಾಂಡವರು ನಿನಗಿನ್ನು
ಸಿಗಲಾರರವರು ಭಗವಂತ ರಕ್ಷೆಯ ಸೇರಿ
ಬದುಕಿಹರು, ತೆರಳು ನೀ ತೆರಳಯ್ಯ ನಿಲ್ಲದಿರು.

ಅಶ್ವತ್ಥಾಮ—ಏನೆಂದೆ! ಪುಸಿಯಾಡಿ ಮಂಕೆರಚಿ ಕಳಹುವೆಂ-
ದೆಣಿಕೆಯೇಂ! ಈ ಕೋಟೆಯೇನಿದುವು! ಆರಿಹರು
ಅದರೊಳಗೆ?

ನಂದಿ—ಭಗವಂತನಪ್ಪಣೆಯಲೀ ಕೋಟೆ ವಿರಚಿತವು!
ಆರಾರು ಬದುಕಬೇಕೆಂದಿದ್ದವರ ತಾನು
ಇದರೊಳಗೆ ನಿಲಿಸಿ ತೆರಳಿದನಿಂದೆ ಭಗವಂತ.
ಅವನಪ್ಪಣೆಯದಿರದೆ ತೆರೆಯದೀ ಕೋಟೆಯಿದು.
ನೀ ತೆರಳಿ ಪೋಗಯ್ಯ.

ಅಶ್ವತ್ಥಾಮ—ಏಂ ನುಡಿದೆ! ತೆರೆಯದೇಂ ಕೋಟೆಯಿದು! ಭಗವಂತ-
ನಪ್ಪಣೆಯನಾಂತಿಹುದೆ?

ಎಂದು ಕೋಪೋದ್ರೇಕದಿಂದ ವಿಸ್ಮೃತಿಗೊಂಡ ಅಶ್ವತ್ಥಾಮನು ತನ್ನ ಆದಿಶಕ್ತಿಯೆಲ್ಲವನ್ನೂ ಆಹ್ವಾನಿಸಿ ಅಸ್ತ್ರ ಶಸ್ತ್ರಗಳೆಲ್ಲವನ್ನೂ ಎಡೆಬಿಡದೆ ಪ್ರಯೋಗಿಸಲು ಪ್ರಾರಂಭಿಸುತ್ತಾನೆ. ಭಯವಿಹ್ವಲನಾಗಿ ನಂದಿಯೂ ಕಂಗೆಟ್ಟು ನೋಡುತ್ತಾನೆ. ನಾಶಕಾರಕ ಶಕ್ತಿಗಳು ಕೋಟೆಯ ಮೇಲೆ ಎಸೆದು ಬೀಳುವ ಮರುಕ್ಷಣದಲ್ಲಿಯೆ ಅವು ಕೋಟೆಯ ಹೆಬ್ಬಾಗಿಲಿನ ಬುಡದಲ್ಲಿ ಅದೃಶ್ಯವಾಗುತ್ತಾ ಇರುವುವು.

ಅಶ್ವತ್ಥಾಮ—(ಸ್ವ) ಬಹು ಪ್ರಮಾದವಿದಾಯ್ತು. ನನ್ನಸ್ತ್ರ ಶಕ್ತಿಯೆ-
ಲ್ಲವ ಕಳೆದು ಕೊಂಡೆನಾಂ! ಇದು ಮಹಾರುದ್ರ ನಿ-
ರ್ಮಾಣದ ಮಹಾಕೃತ್ರಿಮವು; ತಿಳಿಯದಾದೆ ನಾಂ;
ಆತನಿತ್ತಾ ಶಕ್ತಿಯೆಲ್ಲವಂ ಕಳೆದಾಯ್ತು!
ತಪ್ಪಿದೆನು! ಇನ್ನು ಗತಿಯೇನಿಂದು!

(ನಂದಿಯನ್ನುದ್ದೇಶಿಸಿ)

ಘಾತುಕಾ! ನುಡಿಯದೆನ್ನಂ ನೀನು ಕೆಡಿಸಿದೆಯ!
ರುದ್ರನಿರ್ಮಿತ ವ್ಯೂಹವೆಂದೆನಗೆ ನುಡಿಯದಿರೆ
ಭದ್ರಶಕ್ತಿಯನಿಳಿಸಿ ನಾಶವೆಸಗಿದೆ ನಾನು!
ನೋಡೀಗ! ಉದರದುರಿಯೊಳು ತನ್ನ ದೇಹವನೆ
ದಹಿಸುತ್ತ, ಭಜಿಸುತೀಶನನೊಲಿಸಿ, ಪೋಗುವೆ ನಾಂ
ಕೋಟೆಯನು!

ಎಂದು ಅಶ್ವತ್ಥಾಮನು ಸ್ವನಾಶದ ಪರಮಾವಧಿಯನ್ನು ಮುಟ್ಟುತ್ತಿರುವಾಗ ವ್ಯೂಹದ ಬಾಗಿಲು ತೆರೆದು ನಿಲ್ಲುವುದು. ಅಶ್ವತ್ಥಾಮನು ಕತ್ತಿಯನ್ನು ಝಳಪಿಸುತ್ತಾ ಒಳಹೊಕ್ಕನು. ಅವನ ಹತ್ಯಾಕಾಂಡದಿಂದ ಉಂಟಾದ ಆನಂತ ಆರ್ತನಾದಗಳು ಕೇಳಿಸುತ್ತಿವೆ.

ನಂದಿ—(ಸ್ವ) ಪಾಪಿಗಳ ನೀಚಕೃತ್ಯವಸಹ್ಯವಾಗಿ ತೋ-
ರದೆ ಎಂತು ಭಗವಂತ ಧರ್ಮಸ್ಥಾಪನೆಗೈವ!
ಈತ ಗಳಿಸಿದ ಶಕ್ತಿ ನಾಶಪಥದೊಳಗಿಳಿದು
ಸರ್ವರನ್ನಳಿಸಿದಂ; ತಾ ವಧಾಕೃತಿಗೈದ!
ಶಕ್ತಿಯಾಂತವನೀತ ಶಕ್ತಿಪುರುಷಂ, ಲೋಕ-
ಕಲ್ಯಾಣವೆಸಗದಿರೆ ವಿಶ್ವದಲಿ ಪ್ರತಿಕೂಲ
ಶಕ್ತಿಯೊಳು ಸಿಲುಕಿ ಕಣ್ಮರೆಯಪ್ಪ ದುರ್ದೈವಿ!

▪▪▪▪▪▪▪▪

## ದೃಶ್ಯ ೬

ಧರ್ಮಕ್ಷೇತ್ರದಲ್ಲಿ ಭಗವಾನ್ ಶ್ರೀಕೃಷ್ಣನು ಏಕಾಂಗಿಯಾಗಿ ಕೌರವನ ಕೊನೆಯ ದರ್ಶನಕ್ಕಾಗಿ ಬಂದು ನಿಂತಿದ್ದಾನೆ. ಕೌರವನು ಭೂಶಾಯಿಯಾಗಿದ್ದಾನೆ.

ಕೃಷ್ಣ—ಏಂ ಬೆರಳು ಮೂರರಿಂ ಎಣಿಕೆಮಾಡುತಲಿರುವೆ?
ಕೌರವಾ, ಚೇತರಿಸು.

ಕೌರವ—ನೀನಾರು—ಮಾನವನೊ ಮರುಳನೋ ತಿಳಿಯದಿದೆ
ನೀನಾರು?

ಕೃಷ್ಣ—ನಾನೋರ್ವ ಸೈನಿಕ, ನಿರಾಯುಧನು!

ಕೌರವ—ಸೈನಿಕನೆ! ನೀನೋರ್ವ ಸೈನಿಕನೆ! ನಂಬಲಾ-
ರೆನು, ದಿಟವೆ?

ಕೃಷ್ಣ—ಹಾಗೇಕೆ ನುಡಿಯುತಿಹೆ? ಪುಸಿ ಮಾತು ನುಡಿದಿಲ್ಲ.

ಕೌರವ—ಕೃಷ್ಣ ಹೊಸೆದಿಹ ಬಲೆಗೆ ಬಾರದೊಬ್ಬನು ನೀನು,
ಸಾಮಾನ್ಯನಿರಲಾರೆ! ಮುಂದಿನಾ ಯುಗದಲ್ಲಿ
ನನ್ನ ಚರಿತೆಯನುಸುರಿ ಪೆಸರ ನಿಲಿಸೈ ಜಗದಿ.

ಕೃಷ್ಣ—ಪೆಸರು ನಿಲ್ಲದೆ ಇಹುದೆ? ಏನ ಗೈದರದೊಂದು
ಪೆಸರು ನಿಲ್ಲದೆ ಇಹುದೆ? ನಿನ್ನದತಿ ಶಾಶ್ವತವೆ?

ಕೌರವ—ಪೂರ್ತಿಯಾಗಿಹುದಿಲ್ಲ ನನ್ನ ಪೆಸರೀ ಜಗದಿ.
ತಪ್ಪಿ ಬಿದ್ದಿಹೆ ನಾನು. ಇಲ್ಲವಾದರೆ ಪಾಂಡು-
ತನಯರನು ಗೆಲ್ದು ರಾಜ್ಯವನಾಳಬಹುದಿತ್ತು.

ಕೃಷ್ಣ—ಎಲ್ಲಿ ತಪ್ಪಿದೆ ಹೇಳು?

ಕೌರವ—ಗುರುಪುತ್ರನಂ ಕದನ ಪಟ್ಟಕೇರಿಸಿ ಕಳುಹ-
ತಿರ್ದೊಡಾತನ ಜಯಿಸಲಾರದಾಗಿಹುದಲ್ತೆ!
ಮರಣವಿರಹಿತನಾತ!

**ಕೃಷ್ಣ**—ಹಿಂದುಮುಂದುಗಳೆರಡು ತಿಳಿದು ಜನಿಸಿದರೆಂಬ
ಯಮಳಜರೆ ಇದಿರಾಗಿ ನಿಲುವಂದು, ದೀರ್ಘಾಯು-
ವಂತ ತನ್ನಾಗು ಹೋಗುಗಳನ್ನು ತಿಳಿದು, ತ-
ಪ್ಪನು ತಿದ್ದಿ, ಕೈದುಗಳ ಬಿಸುಟಿದ್ದು ತೆರಳುವನು;
ಮರಣವಿರಹಿತ ಸತ್ಯರೂಪನೆನಿಸುವನಾತ.

(ಕೌರವನ ಬೆರಳೆಣಿಕೆಯೊಂದು ನಿಂತಿತು.)

**ಕೌರವ**—ಹಾಗಿದ್ದರಾನೆ ತಾಯಿಗೆ ತೊಡೆಯು ತೋರದಿ-
ದ್ದುದು ತಪ್ಪು; ವಜ್ರಕಾಯಂ ತಾನು ತೊಡೆಯೊಡೆಯ-
ದಿರ್ದಪೆಂ, ವಿಜಯಿಯೆನಿಸುತಲಿರದೆ ಮತ್ತೇನು?

**ಕೃಷ್ಣ**—ಧರ್ಮಾವತಾರಿಯೆಂದೆನಿಸಿ ಜನಿಸಿದನೆಂಬ
ಧರ್ಮಜನೆ ಶ್ವೇತದಿಗ್ಗಜಗಳನ್ನೇರಿ ನಿ-
ನ್ನಿದಿರಿನಲಿ, ಯುಗಧರ್ಮವನ್ನಾಳಿಸಿ ಸುಖವೆಸಗು-
ತಿರ್ದಪಂ; ನೇಹ ನಲ್ಮೆಯೆ ಜಯಿಸಿ, ಆದರ ವಿಜ-
ಯದೊಳೆಲ್ಲ ಪ್ರೇಮದಂಕುರವೆನಿಸಿ ಜಗವು ಸುಖ
ಮಯಪಹುದು. ನಿನ್ನ ಭ್ರಮೆಯಾರುವುದು.

(ಕೌರವನ ಮತ್ತೊಂದು ಬೆರಳ ಎಣಿಕೆಯು ನಿಂತಿತು.)

**ಕೌರವ**—ಎಂತಾದರಾನು ಜಲಜಪವೆಸಗಿ ಮುಗಿಸಲೇ
ಬೇಕಿತ್ತು. ಮತ್ತೆನ್ನನಾರ್ ತಡೆದವರಿರ್ದರೀ
ಜಗದಲ್ಲ, ಜಯಿಸುವರ್?

**ಕೃಷ್ಣ**—ಅಗಲಾನೇ ನಿನ್ನ ಸಮ್ಮುಖದಿ ನಿಂದಪೆನು;—
ದುಶ್ಶಕ್ತಿ ದುಸ್ಸಾಧನೆಯು ನಿನ್ನ ಹಿಂಸೆಯನು,
ತಡೆದುಕೊಳ್ಳುತಲಿದ್ದು, ಸಹನೆಯಿಂ ಕಾಠಿಣ್ಯ-
ಗಳ ಗೆಲ್ದು ತೋರ್ದಪೆಂ. ಸತ್ಯಧರ್ಮವೆ ಜಗದಿ
ನಿತ್ಯಮಯವೆನಿಸುವೆಂ!

(ಕೌರವನ ಬೆರಳೆಣಿಕೆ ಉಳಿದುದೊಂದೂ ನಿಲ್ಲಲು)

**ಕೌರವ**—ಆ ಮಹಾ ಶಕ್ತಿಯುತ ಮಹಿಮನೆಂಬಂ, ನೀನು—!
ನೀನಾರು?

ಕೃಷ್ಣ—ನೋಡಿನ್ನ ಕಣ್ತೆರೆದು,—

ಎಂದು ಕೌರವನಿಗೆ ತನ್ನ ಸಾಕ್ಷಾತ್ಕಾರದ ಪರಿಚಯಮಾಡುತ್ತಾನೆ. ಭಗವಾನ್ ಶ್ರೀಕೃಷ್ಣನ ತೇಜೋಮಯವಾದ ಸತ್ಯ, ಶಾಂತಿ, ಅಹಿಂಸೆ, ಧರ್ಮಗಳ ಸುಂದರಾಕೃತಿಯನ್ನೂ ಸ್ವಯಂ ಪ್ರಕಾಶಮಾನವಾದ ಪ್ರೇಮಸ್ವರೂಪದ ಸುಪ್ರಭೆಯನ್ನೂ ಕೌರವನು ಕಾಣುತ್ತಾನೆ.

ಕೃಷ್ಣ—ಕೌರವಾ, ಯುಗಪುರುಷ! ಮಹಮಹಿಮನಲ್ತೆ ನೀ!
ಬಲು ಸೊಗಸಿನಾಟದಿಂ ನಿನ್ನ ಪಾತ್ರವ ನಟಿಸಿ
ತೋರಿದ್ಯೆ. ಈಗಲದು ಮುಗಿದಾಯ್ತು,—

ಕೌರವನು ತನ್ನ ಪೂರ್ವಾಪರದ ಜ್ಞಾನವನ್ನು ಹೊಂದಿ ಕ್ಷಣಹೊತ್ತು ಶಾಂತಚಿತ್ತನಾಗಿದ್ದಾನೆ. ಭಗವಂತಸ್ವರೂಪ ಶ್ರೀಕೃಷ್ಣನನ್ನು ಮನಸಾ ಧ್ಯಾನಿಸಿ,

ಕೌರವ—ಪ್ರಭುವರಾ, ಸಕಲಾಸೆಯನು ತೊರೆದೆ ನಾನೀಗ.
ಮುಂದೇನು ಅಪ್ಪಣೆಯು! ವಿಧಿಸಿ ರಕ್ಷಿಸು!

ಕೌರವನು ಕೃಷ್ಣನಲ್ಲಿ ಭಗವಂತಸ್ವರೂಪವನ್ನು ಕಾಣುತ್ತಾ ಇರುತ್ತಾನೆ.

ಕೃಷ್ಣ—ಯುಗಪುರುಷನ್ಯೆ, ನೀನು. ಕೌರವಾ, ಆಲಿಸೆಲೆ,
ಇನ್ನು ತುಸು ಸಮಯದಲಿ ಕೊನೆಗೊಳ್ಳುವೀ ದೃಶ್ಯ,
ಜಗಕೆ ಜ್ಞಾನದ ಮಾರ್ಗ ತೋರಲೆಂದಾದುದಿದೆ.
ವಿವಿಧ ಪಾತ್ರಗಳಿಂದಿಸಿ ಸತ್ವ, ತಮ, ರಜಗಳನು
ಜೀವನಕೆ ಸಂತೂಕದಲಿ ಬೆರೆಸಲರಿಯದಿರೆ
ಭ್ರಮಿಸಿದರು. ಅವರವರ ಆಚಾರ, ಶೀಲ ನಡ-
ತೆಗಳಂಥ ಫಲವಹುದು. ಸಾಂಖ್ಯಕರ್ಮಗಳಿಂತು
ವ್ಯಕ್ತಿರೂಪದೊಳಾಗಿ ತೋರುವುದು. ಮಾನವೀ
ಶಕ್ತಿಯೆಲ್ಲವನಾಂತು, ಹಿಂಸೆ ಕೊಬ್ಬಿದರದುವೆ
ಸತ್ಯದರ್ಶನದಿದಿರು ನಿಲಲರಿದು. ಈ ಮಧ್ಯ-
ರಾತ್ರಿಯಲಿ ನಿನ್ನವಧಿ ಮುಗಿಯುವುದು. ಮುಂದೆ ಕಲಿ-

ಯುಗ ಬಹುದು! ಸತ್ಯ ಶಾಂತಿ ಅಹಿಂಸೆ ಪ್ರೇಮದಲಿ
ಜಗವೊಲಿದು ನಲಿಯುವುದು. ಶಾಂತಿಯೇ ಸಮನಿಪುದು.
ಧರ್ಮಸ್ಥಾಪನೆಗಾಗಿ ಜನ್ಮವೆತ್ತಿದೆ ನಾನು,
ಸತ್ಯವೆಂಬಿಳೆಯಿದರ ಪ್ರೇಮರೂಪವನರಿತು,
ಜೀವಕೋಟಿಯೊಳೆಲ್ಲ ಸೌಹಾರ್ದ ಸದ್ಭಾವ
ತುಂಬಿತುಳುಕುವ ವಿಶ್ವಪ್ರೇಮವೇ ಬೆಳಕೆನಿಸೆ
ಸೃಷ್ಟಿಯಾಗಿದೆ—ಬಾಹ್ಯರೂಪವಿದು ಚೆಲುವೆಂದು.
ಗೌತಮಾಶ್ರಮದಲ್ಲಿ ಪಾಂಡವರು ತಂಗಿಹರು;
ತೆರಳುವೆನು. ಮೇಧಾವಿಯೆನಿಸಿದವ ಬಹನೀಗ.
ಈ ಕಥೆಯು ಕೊನೆಗೊಳಿಸು.

(ಎಂದು ಹೇಳಿ ಭಗವಂತನು ಅದೃಶ್ಯನಾಗುವನು.)

\-\-\-\-\-\-\-\-

# ಅಂಕ ೨.

## ಉನ್ಮಾದ

### ದೃಶ್ಯ ೭

ಕ್ರೂರ ನಿಶೆಯ ಗರ್ಭವನ್ನು ಸೀಳಿ ಹೊರಬಂದವನಂತೆ ಸ್ವಾಮಿಕಾರ್ಯದಿಂದ ಉನ್ಮಾದಗೊಂಡ ಅಶ್ವತ್ಥಾಮನು ಅವಸರದಿಂದ ಬಂದು ಕೌರವನ ಇದಿರಿನಲ್ಲಿ ನಿಂತಿದ್ದಾನೆ. ಗುರುಪುತ್ರನ ಭರವಸೆಯ ಮಾತಿನಲ್ಲಿ ವಿಶ್ವಾಸವಿಟ್ಟಿದ್ದ ಕೌರವನು ಅಸುಧಾರಣೆಮಾಡಿಕೊಂಡಿದ್ದಾನೆ. ದೀರ್ಘಶ್ವಾಸೋಚ್ಛ್ವಾಸಗಳನ್ನು ನುಂಗಿಕೊಳ್ಳುತ್ತ ಅಶ್ವತ್ಥಾಮನು ಒಂದೇ ಸವನೆ ನುಡಿಯಲು ಪ್ರಾರಂಭಿಸಿದ್ದಾನೆ.

**ಅಶ್ವತ್ಥಾಮ**—ಮಾಳ್ಪೆನೆಲ್ಲವ ನಿನ್ನ ಮನಸಿನಾಸೆಯ ತಣಿಸೆ;
ಈ ಕ್ಷೇತ್ರದೊಳಗುಳಿದುದಾರಿಲ್ಲ, ನೀನಳಿಯ-
ಲೆಂದೆಸಗಿದೆನು ನಾನು. ಆವ ಶಕ್ತಿಯೊಳೊಂದು
ವ್ಯೂಹಗೈದನೊ ಕೃಷ್ಣ! ಅದರೊಳಗೆ ಸರ್ವರನು
ಬದುಕಲೆಂದಿರಿಸಿದನು! ಮುಂಬಾಗಿಲಲ್ಲಿ ಮಹ-
ರುದ್ರನನೆ ಕಾವಲಿಂಸಿದರಾನು ರುದ್ರನಿ-
ರ್ಮಿತ ಕೋಟೆ ಭೇದಿಸಿದೆ. ಶಂಕರನ ಮೆಚ್ಚಿಸಿದೆ.
ಒಳಹೊಕ್ಕು ಪಾಂಡವರನರಸಿದೆನು. ನಿನ್ನ ಕಾ-
ಣುವ ತವಕಗೊಂಡೆನ್ನ ಕಣ್ಣಿನಲಿ ನಿನ್ನದೇ
ಪ್ರತಿಬಿಂಬ! ಪಾಂಡವರು ಕಾಣಿಸರು! ಸಿಕ್ಕ ಸಿ-
ಕ್ಕವರೆಲ್ಲ ನಾಶಶಕ್ತಿಯೊಳಳಿದು ಹೋಗಿಹರು!

**ಕೌರವ**—ಎಲ್ಲವರ ದಹಿಸಿದೆಯ?

**ಅಶ್ವತ್ಥಾಮ**—ಪಾಂಡವರು ಕಾಣದಿರೆ, ಮತ್ತಲ್ಲಿ ಬದುಕಿಹರ
ಸುಡುವಮೋಘಾಸ್ತ್ರವೆಸೆದೆನು! ಸರ್ವ ಜೀವಕೋ-
ಟಿಯು ದಹನಗೊಂಡಾಯ್ತು! ಮತ್ತುಳಿವರೆಲ್ಲಿ ಪಾಂ-
ಡವರಿನ್ನು! ಅವರ ಸಂತತಿಯೆಂಬ ದ್ರೌಪದಿಯ

ಮಕ್ಕಳೈವರು ಸಹಾ ಸುಟ್ಟುಹೋದರು. ಇನ್ನು
ನೀ ಸುಖಿಸುತಿರಬಹುದು.

**ಕೌರವ**—ಏನನಾಚಾರವನು ಗೈದೆ ನೀ! ರಾಕ್ಷಸೀ ಕೃತ್ಯಗಳು!!

**ಅಶ್ವತ್ಥಾಮ**—ನಿನಗಾಗಿ ಇನ್ನೇನು ನುಡಿದಪೆಯೊ ನಡೆಸುವೆನು!

**ಕೌರವ**—ತಡೆ, ಮೂರ್ಖ ನುಡಿಯದಿರು! ನನಗಾಗಿ ಶಿಶುಹತ್ಯ
ಕೊಲೆಪಾತಕವ ಮಾಡು ಎಂದಾನು ನುಡಿದೆನೇ?
ಶ್ರೇಷ್ಠಕುಲಸಂಭೂತ! ಗುರುಪುತ್ರ! ಸಕಲ ವಿ-
ದ್ಯಾನಿಪುಣನಾದರೇಂ ಕ್ರೂರಕರ್ಮಿಯು ನೀನು,
ಇಂದೀಗ ಉನ್ಮಾದನೇ ದಿಟವು; ನಿನ್ನ ಸಹ-
ವಾಸದಿಂ, ನಮ್ಮ ಕುಲ ಸಂತತಿಯನೇ ಕಳೆದು-
ಕೊಂಡೆನ್ನೈ,—ಪಾಂಡವರ ಕಳುಹೆಂದೊಡೆಲ್ಲವರ
ಸುಟ್ಟು ನೀ ಪ್ರಳಯಕಾರಕನಾದೆ! ನಿನ್ನಿಂದ
ನಮ್ಮ ಕುಲವಳಿದುದೈ! ಶಿಶುಹತ್ಯ, ನರಹತ್ಯ,
ಕುಲನಾಶಗಳ ಗೈದ ನಿನ್ನ ಮುಖ ನೋಡುವುದೆ
ಪಾತಕವು! ಘೋರ ಪಾತಕವಲ್ತೆ! ಮುಂದೆ ನೀ
ಜಗಕೊಂದು ಪಾಪಿಯೆಂದೆನಿಸೆಯು! ನಿನ್ನ ನೋಡಲಾ-
ರೆಂ; ನನಗೆ ಕೊನೆಗಾಲ, ಚಿರಕಾಲದೊಂದು ಬೇ-
ನೆಯ ಚುರ್ಚಿ ಕಳುಹಿದವ ತೆರಳು ತೆರಳೆಲೆ ಪಾಪಿ.

**ಅಶ್ವತ್ಥಾಮ**—(ನಿರುತ್ತರ.)

**ಕೌರವ**—ನಾಶಕಾರಕ ಶಕ್ತಿ ಶೋಧಗಳನಾಂತ ತವ
ಮೇದಸ್ಸು ಬರಿದಾಯ್ತು! ನೀ ಸ್ವನಾಶಕನಾದೆ!

**ಅಶ್ವತ್ಥಾಮ**—ಕೌರವಾ! ಕೌರವಾ!

**ಕೌರವ**—(ನಿರುತ್ತರ.)

**ಅಶ್ವತ್ಥಾಮ**—ಕೌರವಂ ತೆರಳಿದಂ! ಇನ್ನು ಗತಿಯೇನಿಹುದು!
ನಾ ತಿರಸ್ಕೃತನಾದೆ! ನನಗೇಕೆ ಬದುಕಿನ್ನು?

ಆರಿಗೋಸುಗವಿಂತುಗೈದೆನೋ ಅವನೆ ಅಳಿ-
ದಂ; ಜಗದ ಸರ್ವಸ್ವವನು ತೊರೆದು ತೆರಳಿದಂ.
ಅವನಿಂದಲೇ ನಾನು!— ಘನ ಘೋರಪಾತಕವ
ಗೈದೆನೇ! ಎನ್ನ ಮೆಚ್ಚುವರಾರು— ಆರಿಗೊರೆ-
ವೆನು ಭವಣೆ,— ಇನ್ನಾರು ಘಣಿಪರೆನ್ನಂ! ಎಲ್ಲಿ-
ಗೈದಪೆನು! ಅಹಾಹ! ಶೂನ್ಯ ಹಾ! ಶೂನ್ಯವೀ
ಜಗದೊಲುಮೆ.

ಏನು ಯೋಚಿಪೆ ನಾನು! ಏಕೆ ಬಂದಿಹೆನಿಲ್ಲಿ!
ಮುಂದೇನು ಮಾಡಲಿದೆ! ಕೌರವನು ವಿಜಯಿಯೇ?
ಅಳಿದವರೊಳುಳಿದೊಬ್ಬ ನಾನು ವಿಜಯಿಯೆ!— ನಾನು
ಏಕಾಂಗಿಯುಹೆ. ಮಸಣವಿದರೊಳಗೆ ಏಕಾಂಗ
ವಿಜಯಿಯೇಂ! ಏತಕೀ ಭ್ರಮೆಯೆನಗೆ! ಆರಿಗೋ-
ಸುಗ ವಿಜಯ! ಆರ ಮೇಲಣ ವಿಜಯ! ನಿರ್ಭೀತ
ಭೂತನಹೆ! ನಿರ್ಭಯ ನಿರಂಕುಶನು ನಾನಾದೆ!
ರಣವೆಂಬ ನುಡಿಯನಾಡುವ ನರರೆ ಇನ್ನು ಮುಂ-
ದಕೆ ಜಗದೊಳಿಲ್ಲವೆಂದೆಸೆದೆನಾಂ!

ಎಂದು ಬಾಹ್ಯಜ್ಞಾನಶೂನ್ಯನಾಗಿ ಅಲೆದಾಡಲು ಪ್ರಾರಂಭಿಸುವನು. ಅಂಧಕಾರಮಯ ರಣಭೂಮಿಯ ಭೀಕರ ದೃಶ್ಯವೊಂದೇ ಅವನ ಕಣ್ಣಿಗೆ ಎಲ್ಲೆಲ್ಲೂ ಗೋಚರಿಸುತ್ತಿರುವುದು. ಭಯಗೊಳ್ಳುತ್ತಾನೆ. ಮತ್ತೆ ಪುನಹ ಧೈರ್ಯ ತಂದುಕೊಂಡು,—

ಅಶ್ವತ್ಥಾಮ— ಆರ ಭಯವೆನಗಿಹುದು! ಅಳಿವನುಳಿವನ್ನೊಂದು
ಕ್ಷಣದಲ್ಲಿ ನಿರ್ಧರಿಪ ನನಗಾರ ಭಯವಿಹುದು!
ಈ ನಾಡು ನಿರ್ಜನ ನಿರಾಧಾರ! ನಾನೋರ್ವ-
ನೇ ಇಹೆನೆ! ಹಾ—! ಇಂತು ಮಾಡಿದವನಾರಿದನು!
ನಾನು; ನಾನೇ ನಿಜವು! ನಾನಲ್ಲ;— ಇರುವನ್ನೈ
ಇನ್ನೊರ್ವನಿಹನಿಲ್ಲಿ!— ಶ್ರೀಕೃಷ್ಣ ಭಗವಂತ;
ಅವನೆ ಸಾಕ್ಷಾತು ಪರಬ್ರಹ್ಮನಹ! ಅವನಲ್ತೆ—

ಈ ಘೋರ ಕೃತ್ಯಗಳಿಗವನಲ್ತೆ, ಕಾರಣಿಯು.
ಭಗವಂತ ತಾನಾಗಿ ಸರ್ವರಕ್ಷಕನೆನಿಸಿ
ಸರ್ವಭಕ್ಷಕನಾದ! ನಿಷ್ಕರುಣಿ! ಅವನನೇ
ಕಾಂಬೆನಾಂ! ಅವನ ಶಕ್ತಿಯಂ ಕೆಡಹಿ ಅವನ ಕ-
ಣ್ಣಿನ ನೀರ ಸುರಿಸುರಿಸಿ ತೊಡೆಯಿಸುವೆ—ತೊಡೆಯಿಸುವೆ-
ನೀ ಭೂಮಿ. ಎಲ್ಲಿಹನು ಭಗವಂತ! ನನ್ನ ಕಂ-
ಡರೆ ಘೋರ ಶಿಕ್ಷೆಯನು ಕೊಡದಿಹನೆ! ಶಿಶುಹತ್ಯ-
ಗೈದ ಪಾತಕಿ ನಾನು!—ತಿರು ತಿರುಗಿ ಅಳುಕೇಕೆ
ಬರುತಿಹುದು?—ಪರಮಾತ್ಮ! ಅವನಾರು ಕೃಷ್ಣನೇಂ!
ಕೃಷ್ಣನೆನ್ನಂತೋರ್ವ ಮಾನವಂ; ಗೋವಳಂ
—ಎನ್ನ ಶಕ್ತಿಯದೇನು! ಅವನ ಸ್ಥಿತಿಯೇನು! ನಾ-
ನವನ ಅಣುರೇಣು ತೃಣಕಾಷ್ಠದಿಂ ಶೋಧಿಸು-
ತ್ತಿಳಿತರುವೆ ಹಹ್ಹಹ್ಹ! ನನಗೆ ಸಮವೇನವನು.
ಹಾಹಾಹ! ಗೈವೆನೇಂ! ರಾತ್ರಿಯಿದು! ನಿಶಿಯಂಧ-
ಕಾರದಲಿ ಅವುದೂ ಕಾಣದಿದೆ!—ಏನಾಯ್ತು!
ನೇಸರನ ಹಿಡಿದೆಳೆದು ಪ್ರಭೆಯ ಬೀರುವೆ ಜಗಕೆ-
ನಾ ಮಹಾ ಶಕ್ತಿಯುತ ವಿಜ್ಞಾನಿ! ಜಗವನೇ
ಅಂಕೆಯೊಳಗಿರಿಸುವೆನ್ನಂ ತಡೆವರಾರಿಹರು!

ಎಂದು ಮರುಳಾಡುತ್ತಾ, ಅಲೆದಾಡುತ್ತಾ, ಭ್ರಮಿಸುತ್ತಾ ಇರುವಾಗ ಮುಂಜಾವದ ಅರುಣ ಕಿರಣಗಳು ಗೋಚರಿಸುವುವು.

■■■■■■■■

# ಶಸ್ತ್ರಸನ್ಯಾಸ

## ದೃಶ್ಯ ೮.

ಭಗವಾನ್ ಸೂರ್ಯನಾರಾಯಣನ ಕಿರಣಸಾಗರದಲ್ಲಿ ಮಿಂದು, ಗೌತಮಾಶ್ರಮದಲ್ಲಿ ತತ್ವೋಪದೇಶದಿಂದ ಪರಿಶೋಭಿತರಾಗಿ, ಶ್ರೀಕೃಷ್ಣಾರ್ಜುನರು ನಡೆದು ಬರುತ್ತಿದ್ದಾರೆ. ನವಯುಗಾರಂಭದ ಸಂಭ್ರಮವನ್ನು ಸಾರುತ್ತಿದ್ದ ತಂಬೆಲರು ಅವರ ಕಳೆಯನ್ನು ಪಸರಿಸುತ್ತಾ ಇದೆ. ಆದಾಗಲೇ ದುಸ್ಸಾಧನೆಯ ಅಂಧಕಾರದಲ್ಲಿ ಜರ್ಜರಿತಳಾಗಿ ಮೈಮರೆತ ನಿಸರ್ಗದೇವಿಯು, ನೀರವತೆಯನ್ನು ನಿಲಿಸಿ, ಶಾಂತಿ ಪ್ರೇಮಗಳ ಉದಯದಲ್ಲಿ ತೃಪ್ತಿಗಾಯನವನ್ನು ವಿಹಗಗಳ ಸಹಸ್ರ ಕಂಠಗಳಿಂದ ಹಾಡಲುಪಕ್ರಮಿಸಿದ್ದಾಳೆ. ಸಮಗ್ರ ವಸುಂಧರೆಯು ಒಂದು ಕನಸಿನಿಂದ ಎಚ್ಚತ್ತು ನಿಂತಂತೆ ಮುಂದಿನ ಆದಾವುದೋ ಒಂದು ಶಾಂತಿ ವಿಜಯದ ನಿರೀಕ್ಷಣೆಯಿಂದ ಹಾತೊರೆಯುವಂತಿದೆ. ಪ್ರಾತಃಕಾಲದ ಪ್ರಾದುರ್ಭಾವದ ಶುಭ್ರ ಜ್ಯೋತ್ಸ್ನೆಯು, ನಿರ್ಮಲಾಕಾಶವನ್ನು ತುಂಬಿ, ತಮ್ಮಿಂದ ತಾವೇ ಅವನತಿಯನ್ನು ತಂದುಕೊಂಡ ದುಃಶಕ್ತಿಗಳಿಗೂ ಸಹೃದಯತೆಯನ್ನು ಬೀರುವಂತೆ ರಾರಾಜಿಸುತ್ತಿರುವಾಗ, ಶ್ರೀಕೃಷ್ಣನು, ದೂರದಲ್ಲಿ ಏಕಾಂಗಿಯಾಗಿ ಅಲೆದಾಡುತ್ತಾ ಬರುತ್ತಿದ್ದ ಅಶ್ವತ್ಥಾಮನನ್ನು, ಕಾಣುತ್ತಾನೆ.

**ಕೃಷ್ಣ**—ಅರ್ಜುನಾ! ನೋಡಿದೆಯಾ! ಶಕ್ತಿಪುರುಷಂ ಈತ,
ಸ್ವಾಮಿಕಾರ್ಯಕೆ ಹಿಂಸೆಗಳಗೈದು ಬಳಲಿದೀ
ವ್ಯಕ್ತಿಯನು! ಈತ ಗಳಿಸಿದ ವಿದ್ಯೆ ಲೋಕಕಂ-
ಟಕವೆನಿಸಿ ತಾ ಕ್ಷೀಣಗತಿಯನ್ನು ಹೊಂದಿದನು.

**ಅರ್ಜುನ**—ಈತನಲ್ಲವೆ ಪೂಜ್ಯ ಗುರುಪುತ್ರ? ಏತಕೀ
ದುರವಸ್ಥೆ ಬಂದುದೈ ಪರಮಾತ್ಮ? ಕಷ್ಟವೈ!

**ಕೃಷ್ಣ**—ಆರೇನ ಮಾಡಲೂ ಅಸದಳವು! ಶಕ್ತಿಯುತ-
ನಿವ ತನ್ನ ಶಕ್ತಿಯೊಳು ಹಿತವಹಿತವೆನದೆ ಲಯ-
ಕರ್ತನಾದಂ! ನಿಲ್ಲು, ಅವನದೋ ನಮ್ಮೆಡೆಗೆ
ಬರುತಿಹನು! ಮತ್ತೇನು ಹೊಂಚಿಕೆಯನಾಂತಿಹನೊ!

ಅಶ್ವತ್ಥಾಮನು ಶ್ರೀಕೃಷ್ಣನ ಸಮೀಪವರ್ತಿಯಾಗಿ ಅವರನ್ನು ಎವೆಯಿಕ್ಕದೆ ದಿಟ್ಟಿಸುತ್ತಿರುವಾಗ ಅರ್ಜುನನು ಅವನನ್ನು ವಂದಿಸುವನು.

**ಕೃಷ್ಣ**—ವಿಜ್ಞಾನಪುರುಷ! ಮೇಧಾವಿಯಹೆ! ಬ್ರಹ್ಮಪು-
ತ್ರಂ ನೀನು! ಇಂತೇಕೆ ಪರಿವರ್ತಿಸಿಹೆ? ನಾನು
ಬೇಕೇ ನಿನಗೆ? ಬೆರಗುಗೊಂಡಿರುವೆಯೇತಕ್ಕೆ?

**ಅಶ್ವತ್ಥಾಮ**—ಪರಮಾತ್ಮನೆಂಬರೈ ನಿನ್ನನೀ ಜಗದಲ್ಲಿ!

**ಕೃಷ್ಣ**—ಇರಬಹುದು. ಆರಾರ ಬಗೆಯೆಂತೊ ಅಂತೆ ಕಾ-
ಣುವರೆನ್ನ, ನೀನರಿತುಕೊಳಬೇಕು! ಎನ್ನನರ-
ಸುತಲಿಹೆಯ?

**ಅಶ್ವತ್ಥಾಮ**—ಅಹುದು! ನಿನ್ನನೆ ಕಾಂಬ ತವಕದಲ್ಲಿಹೆ ನಾನು;
ಈತನಾರರ್ಜುನನು! ಉಳಿದಿಹನೆ? ಪಾಂಡವರು,—
ಎಲ್ಲವರು ಉಳಿದು ಬಂದಿಹರೇನು?

**ಕೃಷ್ಣ**—ಅಹುದಹುದು.

**ಅಶ್ವತ್ಥಾಮ**—ಅಹಹ ಕೃಷ್ಣಾ! ನಿನ್ನ ನೀತಿಯೇ? ಸಾರ್ವಭೌ-
ಮನ—ಕೌರವನ,—ಏಕಚಕ್ರಾಧಿಪತಿ, ಸಕಲ
ಲೋಕನಾಯಕನವನ ಸಾಮ್ರಾಜ್ಯವನ್ನಳಿಸಿ-
ಯಾದರೂ ಪಾಂಡವರ ನೀ ಪೊರೆವೆಯಲ್ತೆ! ಇದು
ನಿನಗೆ ಸರಿಯೇನಯ್ಯ?

**ಕೃಷ್ಣ**—ನಾನೇನು ಪೊರೆಯುವೆನು? ಅವರ ನೀತಿಯೆ ಅವರ
ಪೊರೆಯುತಿದೆ ಹೊರತೇನು! ಸತ್ಯ ಶಾಂತಿ ಅಹಿಂಸೆ
ಧರ್ಮಗಳಿದಿರು ದೊರೆತನದ ಸಾಮ್ರಾಜ್ಯ ದು-
ಸ್ಸಾಧನೆಯ ಹಿಂಸೆಯಂ ಕೊಂಡು ಮೆಯ್ಮರೆಯುತಿರೆ
ತನ್ನ ತಾನೇ ಕಳೆದುಕೊಂಬುದಲ್ಲದೆ ಬೇರೆ
ಗತಿಯೇನು ಇರಬಹುದು?

**ಅಶ್ವತ್ಥಾಮ**—ಗತಿಯಿರದೆ? ಪಾಂಡವರನುಳಿಸುವಾತಂ ನಿನಗೆ
ಕೌರವರನುಳಿಸುವುದು ಘನವಾಗಬಹುದೇನು?

ಕೃಷ್ಣ—ದುಶ್ಶಕ್ತಿ ದುಸ್ಸಾಧನೆಯು ತಾನೆ ಕೆಳಗಿಳಿದು
ಪ್ರೇಮ ವಿಜಯವನೆತ್ತಿ ತೋರುತಿದೆ—ಬೇರಲ್ಲ.
ಲೋಕಸಮ್ಮತವಿದನು ಮೆಚ್ಚದವರಾರುಂಟು?

ಅಶ್ವತ್ಥಾಮ— ಪ್ರೇಮ ಕೌರವನೊಳಿರದೆ!—ನಮ್ಮನೆಲ್ಲರನೆಷ್ಟು
ಪ್ರೇಮ ಪೂಜ್ಯತೆಯಿಂದ ನೋಡಿಲ್ಲ ಕೌರವನು!

ಕೃಷ್ಣ—ಪ್ರೇಮತಾ ವಿಶ್ವವ್ಯಾಪಿಯದಾಗಿ ಪ್ರೇಮವೆಂ-
ದೆನಿಸುವುದು; ಸಂಕುಚಿತ ಸ್ವಾರ್ಥಸಾಧನೆಗಾಗ-
ಲದು ಪ್ರೇಮವೆನಿಸದೈ. ಪಾಂಡವರಿಗಿರಲೊಂದು
ಸೂಜಿಯೂರುವ ಜಾಗ ಕೊಡೆನೆಂದು ನನಗೆಂದ
ಕೌರವನು ಯುದ್ಧವನೆ ಸಾರಿದನು. ಜಯಕಾಗಿ
ನಿಮ್ಮನೂರೆ ಪ್ರೀತಿಸಿದ. ಇಳೆಯೊಳೆಲ್ಲರಿಗಿಹುದು
ಬದುಕಿಕೊಳ್ಳುವ ಹಕ್ಕು, ಅದರಿಂದ ಬದುಕಿಕೊಂ-
ಡಿಹರವರು! ಎಲ್ಲರನು ಬದುಕಿಸುತ್ತಿಹರಿಂದು.

ಅಶ್ವತ್ಥಾಮ—ಅದಕವರು ಕೌರವರ ಕೊಲಬೇಕೆ?

ಕೃಷ್ಣ—ಬದುಕುವರೆ ಬಿಡೆನೆಂದ ಕೌರವನು ಯುದ್ಧವಮಾ-
ಡುತ ಮಡಿದ.

ಅಶ್ವತ್ಥಾಮ—ಮಿಕ್ಕವರು?

ಕೃಷ್ಣ—ಮಿಕ್ಕವರು ದುಶ್ಶಕ್ತಿಯುಳಿವಿನೊಡಗೂಡಿ ಕ-
ಣ್ಮರೆಯಾದರೀ ಧರೆಯ ನೀತಿ ದುರ್ನೀತಿಯನು
ನಿರ್ಧರಿಸಲಸಮರ್ಥರಾದವರು.

ಅಶ್ವತ್ಥಾಮ—ನೀ ಪರಮ ಘಾತುಕನು; ಪಕ್ಷಪಾತಿಯು; ಘೋರ,—

ಅರ್ಜುನ—ಭಗವಂತನಪ್ಪಣೆಯ ಧಿಕ್ಕರಿಪ ಅವಿವೇಕಿ!
ದೇವನಂ ಜರೆಯುವುದ ಕೇಳಲಾರೆನು ದಿಟವು!

ಎಂದು ಕೋಪಾತಿರೇಕದಿಂದ ಗಾಂಡೀವಕ್ಕೆ ಕೈಯೊಡ್ಡಿದನು. ಶ್ರೀಕೃಷ್ಣನು ಅವನನ್ನು ತಡೆದು,—

**ಕೃಷ್ಣ**—ಅರ್ಜುನಾ! ನಿನಗಂದು ನಾನೊರೆದೆ ಅತಿ ಗುಹ್ಯ
ತರಮಪ್ಪ ಶಾಸ್ತ್ರವಂ! ಹಲವು ನೀತಿಯು ಕರ್ಮ
ಮಾರ್ಗವಂ! ದುಡುಕಬಹುದೇ? ನಿನ್ನ ಶಕ್ತಿಯೇ-
ತಕೆ ಜಗದಿ? ಬಲಹೀನರಂ ರಕ್ಷಿಸಲು. ದುರ್ಬ-
ಲರ ನಿರಾಯುಧರನ್ನು ದಂಡಿಸುವುದೇಂ ನ್ಯಾಯ?
ದುರುಪಯೋಗಿಸೆ ಶಕ್ತಿ ನಾಶಗೊಳ್ಳದೆ ಇರದು.
ಈತನೊಳು ಶಕ್ತಿಯೆಲ್ಲವು ನಿನ್ನ ಸೋಲೆನಿಸ-
ದಿರದಿವನ ಬುದ್ಧಿಯನು ಹಿತವಾದದೊಳು ತಿದ್ದಿ
ತೋರುವೆಂ; ಸೈರಿಸೈ; ಕುಪಿತರೊಳು ಪ್ರೇಮವಿಜ-
ಯವು ಫಲಕೆ ಬಾರದಿಹುದೇ ನೋಳ್ಪೆ. ತಡೆ ನೀನು.

ಬುಧವರನೆ! ಪಕ್ಷವೇಕೈ ಜಗದಿ! ಪಕ್ಷವೊಂ-
ದೇ ಸತ್ಯಮಾರ್ಗವೆಂಬುದು ಜಗದಿ. ಅದಕಾರು
ಘಾತುಕರೊ ಅವರಧೋಗತಿಗಿಳಿದು ಪಾಠತೋ-
ರುವರೊಂದು. ಬುದ್ಧಿಯೊಳು ವಿಹಿತವನೆ ಕೊಳಬೇಕು.
ಉಚ್ಚಗುರಿಯನು ಉಚ್ಚರೀತಿಯೊಳು ಮುಟ್ಟುವುದು;
ಅತ್ಯುಚ್ಚತಮ ಶಾಂತಿಮಾರ್ಗವನ್ನರಸುವುದೆ
ಸಫಲತೆಯ ಸಿದ್ಧಿಯದು ಶಾಶ್ವತವು. ಮನವೊಲಿಸಿ
ಪ್ರೇಮದಿಂದಿರುವೊಂದು ಬದುಕೆ ಭವಸಾರವಿದು;—
ಸೂರ್ಯ ಚಂದ್ರಾದಿ ಗ್ರಹಮಂಡಲವು, ಈ ಭೂಮಿ-
ಯೆಲ್ಲವೂ ಒಂದಿಲ್ಲದೊಂದಿರದು; ಈ ವಿಶ್ವ-
ತತ್ವ ವಿಜ್ಞಾನದೊಳಗಾವಿಹೆವು.

**ಅಶ್ವತ್ಥಾಮ**—ಆ ಮಹಾವಿಜ್ಞಾನ ವೈಚಿತ್ರ್ಯಗಳ ನಿನಗೆ
ತೋರುವೆನು.

**ಕೃಷ್ಣ**—ಏನಧಿಕ ತೋರಲಹುದೈ ನಿನಗೆ? ಇದ್ದುದನೆ
ಪರಿವರ್ತಿಸುತ ತೋರ್ಪೆ. ಪರಿವರ್ತನೆಯು ಸುಖದ
ರೀತಿಯಾದರೆ ಜಗದಿ ಮೆಚ್ಚುವರು. ಆತನೇ
ಪರಮ ವೈಷ್ಣವನೆನಿಪ ಕರ್ಮಯೋಗಿಯು, ನೋಡು.

**ಅಶ್ವತ್ಥಾಮ**—ಪರಮ ವೈಷ್ಣವ ನೀನು! ಕೌರವನನೇಕೆ ನಿ-
ನ್ನುನ್ನತಿಗೆ ಎತ್ತಿಕೊಳ್ಳದೆ ಹೋದೆ?

**ಅರ್ಜುನ**—ಕೌರವನ ರಕ್ಷಿಸುವುದೊಂದೆ ಭ್ರಮೆಯಾಂತ ಈ-
ತನಿಗಿತರ ಜಗವಿನಿತು ಕಾಣದಿದೆ—ಭಗವಂತ.

**ಕೃಷ್ಣ**—ಆ ಮಾರ್ಗ ಕೌರವನೆ ತೊರೆದು ಹೋದಂ. ಅವನು
ಪಾಂಡವರ ಪೊರೆಯುದಿದ್ದರು ಅವರ ನಾಶವನು
ಮಾಡಿಸುವ ಪಥದಲ್ಲಿ ನಡೆದವಂ ನಾಶಗೊಂ-
ಡನು ತಾನೆ;—ಅಳಿವಳಿದು ಉಳಿವಾಯ್ತು; ಉಳಿವಿನಿಂ-
ದುಳಿವಧಿಕವೆನಿಸುವುದೆ ಗಣಿತದಲಿ ಗೋಚರವು.

**ಅಶ್ವತ್ಥಾಮ**—ನಿನ್ನ ಮತವನೆ ಸಾಧಿಸುವ ಪಂಥಕಿಂತು ನೀ-
ನುಸುರುತಿಹೆ.

**ಕೃಷ್ಣ**—ನನ್ನದೊಬ್ಬನ ಮತವಿದಲ್ಲ; ಜಗವೇ ಮೆಚ್ಚು-
ವಂತೆಲ್ಲರೊಂದಾಗಿ ಕುಳಿತು ಯೋಚಿಸಿ ಮಾಡಿ-
ದಂಥ ಮತವೇ ವಿಶ್ವತತ್ವವೆನ್ನಿವುದಲ್ತೆ.
ಜಾಗತಿಕ ಮತವೊಂದೆ. ಮಾನವತೆಗಿಹುದೊಂದೆ
ಧರ್ಮಮಾರ್ಗವು ಸತತ ಸುಖಕಾಗಿ. ನೀನದನು
ಮೀರಲು ಸ್ವನಾಶಕಾರಕನೆನಿಪೆ.

**ಅಶ್ವತ್ಥಾಮ**—ಏನಂದೆ! ಜಗವನೊಂದೇ ಕ್ಷಣದಿ ಸುಡುವ ಶ-
ಕ್ತಿಯುನಾಂತ ನಾ ಸ್ವನಾಶಕನಪ್ಪೆನೆಂತೆಂದು
ನೋಳ್ಪೆ—, ನೀ

ಎನ್ನುವಾಗ ಭಯಂಕರ ಘರ್ಜನೆಯಿಂದ ಭಯಾನಕ ಮೂರ್ತಿಯಾದ ಭೀಮನು, ಅಶ್ರುಧಾರಾಪೂರಿತೆಯಾದ ದ್ರೌಪದಿಯೊಡನೆ ಪ್ರವೇಶಿಸುವನು. ಎಲ್ಲರೂ ತಟಸ್ಥರಾಗಿ ನಿಂತುಕೊಳ್ಳುವರು. ಅವರ ಹಿಂದೆಯೇ ಧರ್ಮಜ ಮತ್ತು ನಕುಲ ಸಹದೇವರೂ ಪ್ರವೇಶಿಸುತ್ತಾರೆ. ಭೀಮನು ಅಟ್ಟಹಾಸದಿಂದ ಅಶ್ವತ್ಥಾಮನನ್ನು ಹಿಡಿದು ಗದಾದಂಡವನ್ನು ಎತ್ತಿ ಹಿಡಿದಿದ್ದಾನೆ.

**ಭೀಮ**—ಕೊಲೆಗಡುಕ! ನಾಶಕಾರಕ! ಹೇಯವರ್ತನೆಯ
ಕೊಲೆಗೈದು, ಯುದ್ಧತೃಷೆಯಾರದಿರೆ ರಾತ್ರಿಯಲಿ

ಕಳ್ಳನೊಲು ಸುಳಿದಾಡಿ ನಿರಪರಾಧಿಗಳೆನದೆ
ನರಹತ್ಯ ಶಿಶುಹತ್ಯಗಳಗೈದ ಅವಿಚಾರಿ!
ನಿನ್ನ ದಂಡಿಸದಿರಲು ಜಗವು ಮೆಚ್ಚುವುದೆಂತು!
ಈ ಗದಾದಂಡವಿದೆ. ಅದಕಾಗಿ ಹಾತೊರೆದು.
ಧರೆಯಿದನು ನಿಂತು ನೋಡಲಿ ಮುನ್ನ ನೆನಪುಳಿಯು-
ದಿದನೊಂದು, ಮಿಕ್ಕವರಿಗಿದೆ ಉದಾಹರಣೆಯೆನೆ.

ಭೀಮನ ಬಂಧನದಲ್ಲಿ ಸಿಲುಕಿ ತೊಳಲಾಡುತಿದ್ದ ಅಶ್ವತ್ಥಾಮನನ್ನು ಕಂಡು,—

**ಅರ್ಜುನ**—ಈತಗೀ ಕ್ರೂರಕರ್ಮಿಗೆ ಜಗದಿ ತಕ್ಕ ಶಾ-
ಸನವೆಸಗದೆಂತು ನಾವಿರಬಹುದು! ಭಗವಂತ?

**ನಕುಲ ಸಹದೇವರು**—(ತಮ್ಮತಮ್ಮೊಳಗೆ)
ಏತಕಿಂಥಾ ಕೃತ್ಯ ಗೈದನೀ ಗುರುಪುತ್ರ!
ಮರುಳನಂತಿಹನಲ್ಲ! ಕೌರವನ ಪಕ್ಷಫಲ!
ಈ ರೀತಿಯಾದನೇತಕೆ ದೇವ! ದೇವಾ, ವಿ-
ನಾಶವೇ ಲೋಕಕಿದು!!

**ಧರ್ಮಜ**—(ಕನಿಕರದಿಂದ) ಬಿಡು ಬಿಡೈ ಭೀಮನೇ ಬಳಲಿಹಂ ಗುರುಪುತ್ರ.
ಅಹಿತನಾದರು ನಾವು ಹಿಂಸಿಸಲು ಬಾರದೈ;
ಕ್ರೂರ ವೃತ್ತಿಯು ವೃತ್ತದೊಳಗೆಂತೊ ಸಿಲುಕುತ್ತ
ಇಂತುಗೈದಿರಬಹುದು! ದಯೆದೋರು.

**ದ್ರೌಪದಿ**—(ಗದ್ಗದ ಕಂಠದಿಂದ) ಏಂಗೈವೆನೆನ್ನ ಮಕ್ಕಳ ಕಳೆದುಕೊಂಡೆ-
ನಮಮಾ! ದೇವ, ಆವ ಸಂಚಿತಫಲವೊ, ಪಾತಕವೊ
ಬಂತೆನಗೆ?

ಪ್ರಶಾಂತಮೂರುತಿಯಾದ ಕೃಷ್ಣನು ಗದಾದಂಡಕ್ಕೆ ಇದಿರಾಗಿ ಬಂದು ಭೀಮನನ್ನು ತಡೆದು,—

**ಕೃಷ್ಣ**—ಬಲಶಾಲಿ, ಭೀಮಸೇನನೆ ನಿಲ್ಲು ನಿಲ್ಲು ನೀ!
ಕುರುಪ್ರೇಮ ಮದದಿಂದ ಭ್ರಮೆಯನಾಂತಿಹನೀತ!

ದುರ್ಮಾರ್ಗಿಗಳ ಸ್ನೇಹ ಸಂಘದಲಿ ನಿರತ-
ನಾದಿವನು, ತನ್ನ ಶಕ್ತಿಯನುಳಿಸಿಕೊಳುವ ಪಥ-
ವನು ಮರೆತು, ಬಳಲಿಹೋದಂ. ತನ್ನ ನೆಲೆಯರಿಯ-
ದಲೆಯುತ್ತ ಮೌಢ್ಯದಾ ಮೋಡದೊಲು ಗುರಿಯಿಲ್ಲ-
ದಂತಿಹನು. ಹಲವು ವಿದ್ಯೆಯ ಕಲಿತು ಸುಕೃತದು-
ಷ್ಕೃತವೆನದೆ, ನಡೆದುಬಂದಿಹನೀತ. ನೋಡಿದೆಯ?—
ನಿನ್ನ ಸಾಹಸಕಂಜಿ ನಡುಗುತಿಹ ಪರಿಯನ್ನು?

ಭೀಮ—ತಡೆಯದಿರು, ದೇವೇಶ. ಕಳೆದ ರಾತ್ರಿಯೊಳಿವನು
ರೌರವದ ಕೊಲೆಗಡುಕ. ಅವನನಾರೂ ಮುಟ್ಟ
ಬಾರದಿದೆ. ದುಷ್ಕರ್ಮಿ. ಈ ಗದಾದಂಡವೇ
ತಕ್ಕ ಶಾಸನವಿವಗೆ! ನೋಡೀಕೆ ಶಿಶುನಾಶ
ದುಃಖದಲಿ ಬೆಂದಿಹಳು! ಕಡುನೀಚನೀತನಹ.

ಕೃಷ್ಣ—ಸಂಹಾರಕರ್ತನೀತಗೆ ನೀಚ ಉಚ್ಚತನ-
ವೆರಡಿಲ್ಲ. ತಂಗಿ ದ್ರೌಪದಿ! ಮರುಗಬೇಡವೌ.
ಜಗದಲ್ಲಿ ಹುಟ್ಟು ಸಾವುಗಳೆರಡು ಹಿಂದು ಮುಂ-
ದನು ತಿಳಿಸಿ ತೆರಳುವುವು. ಆತ್ಮರಕ್ಷಣೆಯಿರದ
ಬಾಳಂತೆ ಮುಗಿದು, ನಿಂತವು—ನಿನ್ನ ಭವಣೆಗಳು
ಚರಿತೆಯಲಿ. ಅಳಿದುದೆನ್ನದು ಉಳಿದುದೆಲ್ಲವಿದು
ನಿನ್ನದೌ. ನೀನು ನಿನ್ನವರನೊಳಗೊಂಡು ತೃಪ್ತಿಯನು
ತೋರುತಿರು. ಸಹನೆಯೋ ಸ್ತ್ರೀರೂಪವೆನಿಪ ನೀ-
ನೇ ಜಗಕೆ ನಲ್ಮೆಳಕು. ಉನ್ಮಾದನೀತ, ಅ-
ಶ್ವತ್ಥಾಮ, ಲಯಶಕ್ತ ವಿಜ್ಞಾನಿ. ಸುಖಪಥವ-
ನುಳಿದಂತು ವಿಶ್ವಕ್ಕೆ ಪ್ರತಿಕೂಲನೆನಿಸಿಹಂ.
ತನ್ನ ಶಕ್ತಿಯ ಹಾಳುಗೈದು ಬಳಲಿಹನಿಂದು.

ಅಶ್ವತ್ಥಾಮ—ಪರಮ ವೈಷ್ಣವ ಪುರುಷ ಭಗವಂತ ನೀನಹುದು.
ನಿನ್ನ ಶಕ್ತಿಯ ನಾನು ಸಂಗ್ರಹಿಸಿ ನಿನಗೆಸೆವೆ.

ಕೃಷ್ಣ— ಅದು ಅಹಿಂಸೆಯು ಮಾರ್ಗವೆನಿಸಲಾರದು. ನನ್ನ
ಬಳಲಿಸುವ ನಿನ್ನ ಛಲ ತೋರಬಹುದೇ ಹೊರತು,
ಲೋಕಕಲ್ಯಾಣದಾ ಗುರಿಯೇನು ತೋರುವುದು?
ಕೆಡಬೇಡ!

ಅಶ್ವತ್ಥಾಮ— ಚ್ಯುತರಹಿತ ನಿನಗೇಕೆ ಶಕ್ತಿಯಿದು! ಭೀಮಾರ್ಜು-
ನರಿಗೇಕೆ ಶಸ್ತ್ರಗಳು? ಇಳಿಸುವೆನು ಅದನಿಂದು.
ನೋಳ್ಪೆನವರೇನು ಗೈಯುವರೆಂದು.

ಅರ್ಜುನ— ವಿಶ್ವರೂಪನು ದೇವನವನ ಶಕ್ತಿಯನಿಳಿಸ-
ಲೆತ್ನಿಸುವ ಮೂರ್ಖತನ ಸೊಕ್ಕಿರುವುದಿವನಲ್ಲಿ.

ಕೃಷ್ಣ— ಎಲ್ಲರಿಗು ಬಲವಿಹುದು,— ಆತ್ಮರಕ್ಷಣೆಗಾಗಿ,
ಪರರ ಏಳಿಗೆಗಾಗಿ. ಬಲದಿಂದ ಬಲವನಿಳಿ-
ಸಲು ಹವಣಿಸುವ ನೀನು ಮೂರ್ಖನಾಗುವೆ. ಪ್ರೇಮ-
ದಿಂದವರ ಮನವೊಲಿಸಿ ಮಾಡಿಸಿದ ಕೃತಿ ನಿನಗೆ
ಶಾಶ್ವತವು. ಭಯಗೊಳಿಸಿ ಮೆಚ್ಚಿಸಲು ಬಹುದೇನು?

ಅಶ್ವತ್ಥಾಮ— ಬಲವೇನು? ಒಲವೇನು? ಉಭಯ ಪಥದೊಳು ಫಲವು
ಸಿದ್ಧಿಪುದು.

ಕೃಷ್ಣ— ಗುರಿಮುಟ್ಟಬೇಕದನು, ಉಚ್ಚಮಾರ್ಗದೊಳೆಲ್ಲ-
ರೊಂದಾಗಿ ಯೋಚಿಸುತ ಮುನ್ನಡೆದು.

ಅಶ್ವತ್ಥಾಮ— ಇಳಿಸವರ ಶಸ್ತ್ರಗಳ ಹಾಗಾದರೀಗಲೇ.

ಕೃಷ್ಣ— ಪ್ರೇಮದಿಂದೊಲಿಸಿಯವರನು ನೀನು ಮಾಡಿಸಲು
ಬೇಹುದಲ್ಲದೆ, ಬಲಾತ್ಕಾರದಿಂದಾಗದದು;—
ಮನಸು, ಕಾಯ, ಪರಿಸ್ಥಿತಿಗಳು, ಎಂಬುದಿವೆ ಹಿಂಸೆ
ಮೂರು ವಿಧ; ಒಂದನೂ ಮಾಡಲೊಪ್ಪದು ಜಗವು;
ನೋಯಲೊಪ್ಪದು ಮನವು. ಎಲ್ಲರೊಮ್ಮತವೆರಸಿ
ಮಾಡಲಪ್ಪುದು ಶಾಂತಿ, ನೆಮ್ಮದಿಯು ನೆಲೆಯೆಂದು.

ಅಶ್ವತ್ಥಾಮ—ಶಸ್ತ್ರಧಾರಿಯ ಮೇಲೆ, ಪ್ರೇಮ ತೋರಲು ಪೇಳ್ವ
 ನೀ ಮಹಾ ಜಾಣನೆಂದೇ ಬಗೆವೆ; ಸಾಗದಿದು.

ಕೃಷ್ಣ—ಭಯವಿಳಿಸಿ ನಂಬುಗೆಯಕೊಳಬೇಕು; ಒಳಿತುಕೆ-
 ಟ್ಟುದನೆಲ್ಲ, ನಂಬಿಯೇ ತಿರೆಯೊಲಿದು ಆಕರ್ಷ-
 ಣೆಯನಾಂತು ತನ್ನೊಳಿರಿಸಿದೆ; ನೀನು ತಿರೆಯಂಶ-
 ವಾಗಿರುವೆ; ಆ ತತ್ವವನು ಮೀರಲಳವಲ್ಲ.

ಅಶ್ವತ್ಥಾಮ—ಕಡು ಜಾಣ ಕೃಷ್ಣನೀ. ಮೊದಲವರು ಶಸ್ತ್ರಸ-
 ನ್ಯಾಸವನು ಕೈಕೊಳಲಿ. ಇಲ್ಲವಾದರೆ ನಾನೆ
 ಮಾಡಿಸುವೆನಾಕೆಲಸ. ನಾರಾಯಣಾಸ್ತ್ರವಿದೆ.

ಭೀಮ—ಆರಿವಂ ಶಸ್ತ್ರವಿನ್ಯಾಸವನು ನುಡಿವುದಕೆ?
 ದೇವ, ನೀ ತಡೆಯದಿರೆ, ತಾನೆ ನೋಳ್ಪನು ಈತ
 ಗದೆಯ ಮಹಿಮೆಯನಿಂದು. ಬೆದರಿಕೆಗೆ ಮಣಿವರಾರ್?

ಕೃಷ್ಣ—ತಡೆ ಭೀಮ! ಕುಪಿತರೊಳು ಮೂಢರೊಳು ದುಡುಕದಿರು.
 ವಿಜ್ಞಾನ ಸೊಕ್ಕಿದೀ ನರನೀತ; ಮಾನವನ
 ಮಾನವತೆಯಿಂ ಕಾಂಬ ಪರಿ ಮೇಲು. ಇವನಸ್ತ್ರ
 ಶಕ್ತಿಯಲಿ ಜೀವಾಣು ಬದುಕದೈ. ಬಲ್ಲನೆ-
 ಲ್ಲವನಿವನ ಕೆಣಕಲಾಗದು ನಾವು! ವಿನಯಮಾ-
 ರ್ಗವು ಶೀಘ್ರ ಫಲಕಾರಿ. ಈತನೇಂ ಗೈವನೋ
 ನೋಡಲಿದೆ. ನಲ್ಮಾತಿನಿಂದರಿಯಬೇಕವನ.

ಅಶ್ವತ್ಥಾಮ—ಏಕಾಂಗಿಯಾಗಿಹೆಂ! ಎಲ್ಲರಂ ಲಯಮಾಡಿ
 ನಿನ್ನನೀಗಲೆ ಗೆಲ್ದು ವಿಜಯಿಯೆಂಬೆಂ ಕ್ಷಣದಿ.

ಕೃಷ್ಣ—ಅದು ವಿನಾಶದ ಮಾರ್ಗ! ಕೆಡುವುದುಚಿತವೆ ನೀನು?
 ದಿವ್ಯ ವಸ್ತುವನೊಂದು ದುರಭಿಮಾನದಿ ದುಡುಕಿ
 ದುರುಪಯೋಗಿಸಬಹುದೆ? ಕೆಟ್ಟುಕೆಡಿಸುವೆಯೇಕೆ?

ಅಶ್ವತ್ಥಾಮ—ಆಗುಹೋಗುಗಳೆಂತೊ! ಮುಗಿಯಲಿಂದೇ ಎಲ್ಲ.

ಕೃಷ್ಣ--ಅವುದೂ ಮುಗಿಯದಿಹ ಜಗದಲ್ಲಿ ಮುಗಿಸುವವ-
ರಾರುಂಟು? ಮುಗಿಸಲೆಂಬುವ ತನ್ನೊಳಿದ್ದುದನೆ,
ಮುಗಿಸುವಂ. ಮತ್ತೆ ನಿರುಪಾಯನಾಗುವಷವನೆ.

ಅಶ್ವತ್ಥಾಮ—ಏಕಾಂಗ ವಿಜಯಿಯೆನಿಸುವೆನೀಗ ನೋಡಿಲ್ಲಿ.

ಎಂದು ಅಶ್ವತ್ಥಾಮನು ಶ್ರೀಕೃಷ್ಣ ಪರಮಾತ್ಮನ ಮತವೆಂದು ಭ್ರಮಿಸಿ ನಾರಾಯಣಾಸ್ತ್ರವನ್ನು ಪ್ರಯೋಗಿಸುತ್ತಾನೆ. ಆ ಮಹಾಸ್ತ್ರವು ಪಾಂಡವರನ್ನು ಮುಸುಕಲು ಪ್ರಾರಂಭಿಸುವಾಗ,—

ಕೃಷ್ಣ—ಧರ್ಮಜಾ! ವಿಬುಧನೀತಂ ಮೂಢ! ಎನ್ನಮತ-
ವೆನ್ನುತೀ ಶಕ್ತಿಯನು ಕೊಂಡೆದ್ದು ದುಡುಕಿದನು!
ನೀವಂಜದಿರಿ ಇನ್ನು. ಅವನಸ್ತ್ರಶಕ್ತಿಯಿ-
ಲ್ಲಿಗೆ ಮುಗಿಯಿತು. ನಿರಾಯುಧನಾದ. ಶಸ್ತ್ರಸ-
ನ್ಯಾಸವನು ಕೈಕೊಳುವೆವಾವಿಂದು ಶಾಂತಿ ವಿಜ-
ಯಕೆ. ಅದಕ ಶರಣೆಂದು ನಿಮ್ಮಸ್ತ್ರಗಳನೆಲ್ಲ
ಕೆಳಗಿಡಿರಿ. ಭೀಮ, ಅರ್ಜುನ, ನಕುಲ, ಸಹದೇವ,
ಎಲ್ಲರೂ ಶಾಂತಿವಿಜಯಕೆ ಮಣದು ನಿರ್ಭಯದಿ
ನೆಲೆಯಾಗಿ. ಲಯಶಕ್ತಿಯೊಳಗದು ವಿಲೀನವಪ್ಪುದು.

ಎನಲು ಎಲ್ಲರೂ ಶಸ್ತ್ರಗಳನ್ನು ಕೆಳಗಿಡಲು ನಾಶಕಾರಕವಾದ ವಿಚಿತ್ರ ಯುದ್ಧ ಸಂಗ್ರಹಗಳೆಲ್ಲ ಅವನಸ್ತ್ರದಲ್ಲಿ ಭಸ್ಮೀಭೂತವಾಗುತ್ತಿರುವಾಗ,—

ಭೀಮ—ಆಗದಾಗದು, ನಾನು ಶರಣೆಂಬ ಕ್ಷತ್ರಿಯನೆ?
ಈ ಗದಾದಂಡವಿದು ನನ್ನ ರಕ್ಷಿಸದಿಹುದೆ?

ಎಂದು ಆತ್ಮರಕ್ಷಣೆಯ ಗದಾದಂಡವನ್ನು ಬಿಡದಿರಲು ಲಯಶಕ್ತಿಯು ಅವನನ್ನು ನಾಲ್ದೆಸೆಗಳಿಂದಲೂ ಸುಳಿದು ಮುತ್ತುತ್ತಿರಲು ಶ್ರೀಕೃಷ್ಣನು ಭೀಮನ ಸಮೀಪವರ್ತಿಯಾಗಿ,—

ಕೃಷ್ಣ—ಎಲ್ಲರಸ್ತ್ರವನಿಳಿಸಿ ಶಾಂತಿವಿಜಯಕೆ ಶರಣು
ಬಂದಿರಲು ನಿನಗಾತ್ಮರಕ್ಷಣೆಯದೇನಿಹುದು?

ಎನ್ನುತ್ತ ಭೀಮನ ಕೈಯಿಂದ ಗದೆಯನ್ನು ತೆಗೆದು ಕೆಳಗಿಡಲು ಲಯಶಕ್ತಿಯೊಳಗದು ಸೇರಿ ಅಂತರಿಕ್ಷಕ್ಕೆ ನೆಗೆದು ಭಯಂಕರ ಸ್ಫೋಟನೆಯಾಗುವುದು. ಲಯಶಕ್ತಿಯ ನಾಶಕ್ರಿಯೆಯಲ್ಲಿ ಬೆಪ್ಪಾಗಿ ನಿಂತಿದ್ದ ಅಶ್ವತ್ಥಾಮನು ಆ ವಿಚಿತ್ರ ಸ್ಫೋಟನೆಗೆ ಬೆಚ್ಚಿಬಿದ್ದು ಪ್ರತಿಘಾತದಿಂದ ತನ್ನ ಮೇಧಾಶಕ್ತಿ ಸರ್ವಸ್ವವನ್ನೂ ಕಳೆದುಕೊಳ್ಳುತ್ತಾನೆ.

**ಕೃಷ್ಣ**—ಅರ್ಜುನಾ! ನೋಡಿದೆಯ? ಲಯಮಾಳ್ಪ ಶಕ್ತಿಯಿಂ
ಅಣುನಾಶ ಕ್ರಿಯೆಯಾಗ ತೊಡಗುತಿದೆ! ತಡವೇಕೆ?
ವೈಷ್ಣವೀ ಶಕ್ತಿಯನು ಸಂಗ್ರಹಿಸಿ ಎಸೆದದನು
ಪ್ರತಿಭಟಿಸು. ಒಂದಳಿವ ಮೊದಲೆರಡು ಅಣುವಿನು-
ತ್ಪತ್ತಿಯಿಂ ಅದರ ದಾಹವ ತಣಿಸು. ಪ್ರಕೃತಿ ಲ-
ಕ್ಷಣವದುವೆ. ಜಗದ ಕಲ್ಯಾಣದಿಂ ಸುಖವುಣ್ಮು
ವುದು. ಜವಧಿ ಶಾಂತಿ, ವಿಜಯವನಾಂತು ಮೆರೆಯುವುದು.

ಎನಲು ಅರ್ಜುನನು ಶ್ರೀಕೃಷ್ಣ ನಿರೂಪಣೆಯ ವೈಷ್ಣವಾಸ್ತ್ರವನ್ನು ಪ್ರಯೋಗಿಸುತ್ತಾನೆ. ಲಯೋತ್ಪತ್ತಿ ಶಕ್ತಿಗಳು ತಕ್ಷಣವೇ ಒಂದನ್ನೊಂದು ಸೇರಿಕೊಂಡು ವಿಶ್ವವ್ಯಾಪಕನಾದ ಶ್ರೀಕೃಷ್ಣ ನಿರೂಪಣೆಯಂತೆ ವಿಶ್ವದಲ್ಲಿ ಬಂದು ಸೇರಿಕೊಳ್ಳುತ್ತವೆ. ಶ್ರೀಕೃಷ್ಣನು ತನ್ನ ಯೋಗಬಲದಿಂದ ಅವನ್ನು ಪರಿಗ್ರಹಿಸಿಕೊಂಡು,—

**ಕೃಷ್ಣ**—ವಿಬುಧವರನೆನಿಸಿರ್ದೆ! ವಿಜ್ಞಾನ ವಿದ್ಯೆಗಳ
ಸುಜ್ಞಾನದಿಂ ಜಗದಿ ಮಾನವತೆಯಭಿವೃದ್ಧಿ-
ಗಾಗಿ ಉಪಯೋಗಿಸಲು ಧನ್ಯನೆನಿಪಂ ನರನು.
ಬರಿದೆ ನೀ ಸ್ವಾರ್ಥ ಸಂಕುಚಿತ ದುಸ್ಸಾಧನೆಗಳ-
ನಳವಡಿಸಿ ಬಳಲಿದೆಯ? ಸೈರಿಸ್ಯೆ; ಇನ್ನುಳಿದ
ದಿನಗಳ ಹಿಮಾಲಯವ ಸೇರಿನೀ ಸರ್ವಜನ
ಸುಖಕಾಗಿ ತಪಗೈದು ಪರಮಪದವನು ಗಳಿಸು.
ಜಗವಿದನು ತಿಳಿವಂತೆ ವಿಶ್ವದೊಳು ನೀ ಚಿರಂ-
ಜೀವಿಯಾಗಿಹೆ. ನಾಡೊಳಿರಬೇಡ. ನಡೆ ಮುನ್ನ.

ಭಗವಾನ್ ಶ್ರೀಕೃಷ್ಣನಿಗೆ ತನ್ನ ಹಾವಭಾವದಿಂದಲೇ ಶರಣೆಂದು ಅಶ್ವತ್ಥಾಮನು ಅಲ್ಲಿಂದೆದ್ದು ಹಿಮವತ್ಪರ್ವತಕಭಿಮುಖವಾಗುವನು.

ಕೃಷ್ಣ—ದ್ರೋಣಪುತ್ರನು ಜಗವನಗಲಿದನು. ದುಸ್ಸಾಧ-
ನೆಯುಗೂಡಿ ಸರ್ವಶಕ್ತಿಯು ಕಳೆದುಕೊಂಡು ನಿ-
ಷ್ಪ್ರಯೋಜನನಾದ. ಧರ್ಮರಾಜಾ, ಭೀಮಾರ್ಜುನ-
ನರು, ನಕುಲ ಸಹದೇವ, ತಂಗಿ ದ್ರೌಪದಿ, ನಾವು
ತಡೆಯುದೀಗಲೇ ತೆರಳಿ ನಿಮ್ಮ ಹಿರಿಯರನು, ಧೃತ-
ರಾಷ್ಟ್ರ ಗಾಂಧಾರಿ, ಕುಂತಿಯರ ಕಾಣಲು ಬೇಕು.
ನಡೆಯಿರೈ. ಸತ್ಯ ಶಾಂತಿ ಅಹಿಂಸೆಗಳ ವಿಜಯು-
ವೇಕಾಂಗ ವಿಜಯುವೆನಿಕುಂ. ಜಗಕೆ ಸುಖವದುವೆ.

(ತೆರೆ ಬೀಳುವುದು.)



# ಶಾಂತಿ ವಿಜಯ

## ದೃಶ್ಯ ೯

ಧೃತರಾಷ್ಟ್ರ ಸಾರ್ವಭೌಮನ ಆಸ್ಥಾನ. ಯುದ್ಧಾಸಕ್ತ ನೂರುಮಂದಿ ಪುತ್ರರೂ ವಿನಾಶಕ್ರಿಯೆಯನ್ನು ಪ್ರತಿಭಟಿಸಲು ಉಂಟಾದ ಭೀಮಶಕ್ತಿಯೊಳಗೆ ಅದೃಶ್ಯರಾದುದನ್ನು ಕೇಳಿ ಹೃದಯಭಾರದಿಂದ ನಿರ್ವಿಣ್ಣನಾಗಿದ್ದಾನೆ. ಉಭಯ ಪಾರ್ಶ್ವಗಳಲ್ಲಿಯೂ ಕೃಪಾಚಾರ್ಯ ಮೊದಲಾದ ರಾಜಕಾರ್ಯ ದುರಂಧರರೂ, ಗೌತಮ, ವ್ಯಾಸ ಮೊದಲಾದ ತತ್ವಪಾರಂಗತರಾದ ಮಹರ್ಷಿಗಳೂ, ಕುಳಿತಿದ್ದಾರೆ. ಮತ್ತೊಂದೆಡೆಯಲ್ಲಿ ಧರ್ಮರಾಯ, ಅರ್ಜುನ, ನಕುಲ, ಸಹದೇವರು ವಿನಯಾ ಪೂರಿತರಾಗಿ ಕುಳಿತಿದ್ದಾರೆ.

**ಧೃತರಾಷ್ಟ್ರ**—ಆವ ಸಂತಸ ತೋರಲಿಕ್ಕಾಗಿ ಬಂದಿಹಿರಿ!
ಮಕ್ಕಳಳಿದಿಹ ಸುದ್ದಿ ಸರಿಯೆಂಬುದನು ಸಾರಿ,
ರಾಜ್ಯವಿದು ಮಸಣವೆನಿಸಿದ ಪರಿಯನೊರೆವುದಕೆ
ಬಂದಿರೇಂ? ಧರ್ಮಜಾ, ಈ ಘೋರ ಹತ್ಯವಂ
ಕಂಡೆಂತು ಸೈರಿಸುತ ದಣಿಯದುಳಿದಿಹೆ ನೀನು?

**ಧರ್ಮರಾಯ**—(ನಿರುತ್ತರ)

**ಧೃತರಾಷ್ಟ್ರ**—ಮೌನವರಿಸದೆ ಬೇರೆ ದಾರಿಯೇನಿದೆ ನಿನಗೆ?
ಎಲ್ಲರಂ ಕೊಂದಿಕ್ಕಿ ಬದುಕಲೆನಿಸಿಹ ನಿನ್ನ
ಅನುಜರಾಡಳಿತೆಯಲಿ ನಿನಗಾವ ಸ್ವಾತಂತ್ರ್ಯ?
ಮೌನಧಾರಣೆಯಿಂದ ಮಡಿದರೆನ್ನವರೆಲ್ಲ!

**ಧರ್ಮರಾಯ**—ಕೋಪವೇಕೈ ತಾತ! ನಿನ್ನಾಜ್ಞೆಯಂತಾನು
ನಡೆದುಕೊಳ್ಳುವೆ. ನಾವು ಮಾಡಿದರೆ ಅಪರಾಧ
ಕ್ಷಮಿಸಿ ರಕ್ಷಿಸು. ನಿನಗೆ ಬೇಕಾದ ತೆರವಿಹೆವು.
ಸತ್ಯ ಧರ್ಮವನುಳಿಸಿ ಪ್ರೇಮದಲಿ ನೋಡೆಮ್ಮ.

**ಧೃತರಾಷ್ಟ್ರ**—ನೀನೇನನಾಡಿದರು ನನಗೆಂತು ನೆಮ್ಮದಿಯು!
ನೂರು ಮಕ್ಕಳ ನುಂಗಿ ಸೊಕ್ಕಿದಾ ಭೀಮನನು

ನೋಡಿದಾಕ್ಷಣ ನನ್ನ ಸರ್ವಾಂಗ ಕುಸಿಯುದೆ! 
ಅವರೆಲ್ಲರಳಿವಿಗೇ ಹಾ! ದೇವ, ದೇವನೇ!—
ಅವರೆಲ್ಲರಳಿವಿಗೇ ಭೀಮ ಜನಿಸಿದನಲ್ಲ!
ಜನಿಸಿ ಬದುಕಿದನಲ್ಲ,—ಮುನ್ನವನು ಮತ್ತಾರ
ಮರ್ದನಕೆ ಬದುಕಿಹನೊ! ತಿಳಿದರಾರ್! ಪೇಳ್ವರಾರ್!

**ಕೃಪಾಚಾರ್ಯ**—ಬದುಕಿ ಕೊಂಡಿಹನವನು ರಾಜಾಧಿರಾಜನೇ!
ಭೀಮ ಬದುಕಿಹನಿಂದು. ಬಲವಾಂತು ಪೆರ್ಚಿದವ
ಜಗವನೇ ತನ್ನಂಕೆಯೊಳಗಿರಿಸದಿಹನೇನು?

**ವ್ಯಾಸಮಹರ್ಷಿ**—ಏಂ ನುಡಿವೆ! ಆಚಾರ್ಯ! — ರಾಜಕಾರಣಧೀರ-
ನೆನಿಸಿಕೊಂಡವ ನೀನು, ಅನ್ಯರಲಿ ಪ್ರೇಮ ಬೀ-
ಜವ ಬಿತ್ತಿ ಬೆಳೆಯಿಸುವದುಳಿದು, ಬೇಡದ ತಪ್ಪು
ದಾರಿಯನು ತೋರುತ್ತ, ಮನಕೆ ಸಂಶಯವೂದಿ,
ಕೆಣಕಬಹುದೇ ನೀನು?—ಭೀಮನೇಂ,—ಎಲ್ಲವರು
ಶಸ್ತ್ರಸನ್ಯಾಸವನು ಕೊಂಡಿಹರು. ತಂತಮ್ಮ
ಧೋರಣೆಯ ಸಾಧಿಸಲು ಶಸ್ತ್ರವಿನ್ನುಳಿದಿಲ್ಲ!
ಇನ್ನೇಕೆ ಬಿರುನುಡಿಯನೆಳ್ಚರಿಪೆ?

**ಧೃತರಾಷ್ಟ್ರ**—ಬಾಹುಬಲಿ ಭೀಮನಿಗೆ ಶಸ್ತ್ರವೇತಕೆ ವಿಬುಧ?
ಸರ್ವಸ್ವವಳಿದಮೇಲಿನ್ನೇನು ಶಸ್ತ್ರ ಸ-
ನ್ಯಾಸವಿದು?

**ಅರ್ಜುನ**—ರಾಜ್ಯದಾಸೆಗೆ ಇಂದು ಬಂದವರು ನಾವಲ್ಲ!
ಎಲ್ಲರೊಮ್ಮತವರಿತು ಅದರಂತೆ ನಡೆವುದಕೆ
ಬಂದು ಸೇರಿದೆವಿಲ್ಲಿ. ನಮ್ಮ ಮನ್ನಿಸಬೇಕು!

**ಕೃಪಾಚಾರ್ಯ**—ಮನ್ನಣೆಯನರಸುವಿರಿ! ಸಮರವನೆ ಮನ್ನಿಸುತ
ದೇಶದಳಿವಿನಲಿ ಮತ್ತೇನು ಮನ್ನಣೆಯಹುದು?

**ವ್ಯಾಸಮಹರ್ಷಿ**—ಸರ್ವರೊಪ್ಪುವ ಮತವನಾಡಿ ಮನ್ನಣೆಯಿತ್ತು
ಮನ್ನಣೆಯ ಪಡೆವೊಂದು ನ್ಯಾಯ ಬೇಕೈ! ನೀನು

ಬರಿದೇಕೆ ಹುಳುಕನರಸುತ, ಮಾತು ಮುರಿಯುತಿಹೆ?
ಶಸ್ತ್ರಸನ್ಯಾಸವಶ್ವತ್ಥಾಮನಿಂದಾಯ್ತು!
ಶಾಂತಿ ವಿಜಯದೊಳಿನ್ನು ರಾಜ್ಯಭಾರದ ಪರಿಯು-
ನರುಹಿ ಜನತೆಯ ಸುಖದ ಹಾದಿಯನು ಹಿಡಿವೊಂದು
ಬಗೆಯ ಬಯಕೆಯದಿಂದು ಎಲ್ಲರಿಗೆ ಬಂದಿಹುದು
ಅದನು ಕೈಗೂಡಿಸುವುದೆಮ್ಮ ಯತ್ನವು ಬೇಕು.

**ಕೃಪಾಚಾರ್ಯ**—ಇಹನಲ್ಲ, ರಾಜ್ಯಭಾರಕೆ, ರಾಜ ರಾಜೇಶ
ಧೃತರಾಷ್ಟ್ರ ಮಹರಾಜ! ನಮಗೇಕೆ ಗೊಡವೆಯದು!

**ವ್ಯಾಸಮಹರ್ಷಿ**—ಆ ರೀತಿ ನುಡಿಯದಿರು! ಇತರ ವಿಷಯಗಳೆಲ್ಲ
ಎತ್ತಿ ತೋರುವ ನೀನು, ಶಾಂತಿಮಾರ್ಗವ ತೋರ-
ಲಾರೆಯೇಂ! ಅವರಿವರ ಹಳಿಯುತ್ತ ಮನಕೆ ಕಿ-
ಲ್ಬಿಷವಿಕ್ಕದಿರಬೇಕು! ವಿಹಿತಮಾರ್ಗವನರಸು.

**ಕೃಪಾಚಾರ್ಯ**—ಭೀಮನುಳಿದಿಹ ಚಿಂತೆಯೆಮ್ಮರಸನಾವರಿಸಿ
ದಿಕ್ಕವಗೆ ತೋರದಿದೆ.

**ವ್ಯಾಸಮಹರ್ಷಿ**—ದಿಕ್ಕೇನು? ತನ್ನ ಮಕ್ಕಳ ಮತವು ಮೆಚ್ಚದಿರೆ
ದುಷ್ಕೃತವ ನೋಡದೊಲು ಹುಟ್ಟಿದಾರಭ್ಯದಿಂ
ಕಣ್ಣುಮುಚ್ಚಿದನಾತ. ತನ್ನ ಮಕ್ಕಳೆ ಭೀಮ-
ಗಿಕ್ಕೆ ವಿಷವನ್ನುಣಿಸಿದರು ತಾನು ಬದುಕಿದಂ.
ಅರಗು ಮನೆಯೊಳಗುಳಿದು ಬಂದಿಹರು. ರಕ್ಕಸನ-
ನಿದಿರಾಡಿ ಗೆಲ್ದು ಬಂದಿಹನವನು; ಮಿಕ್ಕವರ
ಮತಕಾಗಿ ಮಡದಿ ಮರುಗಲು ನೋಡಿ ಸಹಿಸಿದನು.
ಮತ್ತೇನು! ಬಾಲ್ಯದಿಂದಿದು ತನಕ ಕಷ್ಟವನೆ
ಸಹಿಸುತ್ತ ಕೊನೆಗೆ ಕದನವ ಕಟ್ಟಿ ಕಾದಿದರು
ಬದುಕಿ ಬಂದಿಹನೀಗ! ಸಾಲದೇ ಭೀಮ ಬಳ-
ಲಿದುದಿನ್ನು! ಬಹುದೀರ್ಘಕಾಲದಿಂ ಬಳಲಿಕೆಯ
ಸಹಿಸುತ್ತ ತನ್ನ ಶಕ್ತಿಗೆ ಸಹನೆಯೊಂದೆ ಗೆಲ-

ವೆಂಬಂತೆ ಜಗಕೆ ತೋರಿದನಾತ! ಬಳಲಿಪೆಯ?
ಇನ್ನು ನೀನವನನ್ನು ಬಳಲಿಪೆಯ? ಬದುಕಿಹನು!
ಮರುಕದಿಂದವನನ್ನು ಮನ್ನಿಸುತ 'ಬಳಲಿದೆಯ
ಬೇಸರಿಸದಿರು; ನಮ್ಮ ತಪ್ಪನ್ನು ಮರೆತುಬಿಡು,'
ಎಂದು ಸತ್ಕರಿಸದಿರಬಹುದೇನು! ನಮ್ಮ ರಾ-
ಜ್ಯಕೆ ಬಂದು ಮನ್ನಣೆಯ ಕೋರುತಿರೆ ಭಂಗಿಪುದೆ!
ಸರಿಯಲ್ಲ; ದಯವಿರಿಸು.

ಕೃಪಾಚಾರ್ಯ—ಭೀಮನುಳಿದಿಹ ಭಯದೊಳೆಂತು ದಯೆ ಬರಬಹುದು?

ವ್ಯಾಸಮಹರ್ಷಿ—ಆ ಭಯವ ಬಿಡಿಸುವುದಕಾಗಿ ಯೋಚಿಸಬೇಕು.

ಕೃಪಾಚಾರ್ಯ—ನ್ಯಾಯ ಭ್ರಷ್ಟರಿಗಾವ ಮತವ ಹೇಳಲಿ ಜಗದಿ?
ಶಾಂತಿ ಮಾರ್ಗವನಾರು ಸಹಿಸುತಲಿರುವರು ಹೇಳು.

ವ್ಯಾಸಮಹರ್ಷಿ—ನ್ಯಾಯ ಭ್ರಷ್ಟತೆಯೆಂಬ ತೀರ್ಪು ಮೊದಲೇ ಇತ್ತು
ಮತ್ತೆ ಶಾಂತಿಯ ಕೋರ್ವ ಪರಿಯು ಸರಿಯೇ ನೋಡು.

ಕೃಪಾಚಾರ್ಯ—ತಪ್ಪಿತಸ್ಥರು ಮೊದಲು ದಂಡಿಸಲ್ಪಡಬೇಕು.

ಗೌತಮ ಋಷಿ—ಘನಘೋರ ಯುದ್ಧದೀ ದಂಡನೆಯು ಸಾಲದೇಂ?
ಮತ್ತು ಮತ್ತೂ ತಪ್ಪು ಸ್ಥಾಪನೆಯ ದಂಡನೆಯೆ?
ತಪ್ಪು ಸರಿಗಳ ತೀರ್ಪು ಕದನ ವಿಜಯದೊಳೆಸೆದು
ತೋರದಿದೆ. ಅಳಿದುಳಿದವರು ನಾವು ಹೊಸತೊಂದು
ಪುಟತೆರೆದು ಮುಂದಿನಾ ಸುಖಪಥವ ಶೋಧಿಸಲು
ಬೇಕೆಂದು,—ಹಳೆಯ ಹಾಳೆಯ ಚಿತ್ತು ಡಜೆಗಳನ-
ದೇನೆಂದು ಪರಿಕಿಸುವ ಬದಲೀಗ ಹೊಸಥಾಟಿ-
ಗೊಲವಿನಲಿ ದನಿಗೊಡುವುದೊಳಿತಲ್ಲವೇ, ನೋಡು.

ಕೃಪಾಚಾರ್ಯ—ಮಾತೆ ಮುನ್ನಡೆವುದಲ್ಲದೆ ಕೃತಿಯು ಹಿಂದುಳಿದು
ನಡೆಯದಿದೆ.

**ಗೌತಮ** — ಸುಕೃತಗೊಪ್ಪುವ ಮಾತು ಮೊಳಗಿದರೆ ವಿ ಕ್ರಮರು
ನಚ್ಚಿ ನೇಹದೊಳದನು ತಿಳಿಯುವರು. ತಾವೊಲಿದು
ಬಳಿಕೆಮ್ಮ ಕೃತಿಗಳಲಿ ತೋರುವರು. ಕೆಟ್ಟ ಯೋ-
ಚನೆಗಿಂಬು ಬರುವ ಮೊದಲೇ ತಮ್ಮ ಸುವಿವೇಕ-
ದಿಂ ತೂಗಿ ಸರಿಯಾವುದುಂಟದನು, ಸುಜ್ಞಾನಿ-
ಗಳ ಸಂಘ ಸಲಹೆಗಳ ನೆರವಿಂದ ತಿಳಿಯುತಾ-
ಚರಿಸೆ, ತನಗೂ ತನ್ನವರಿಗೆಲ್ಲ ಮಿಕ್ಕ ಜಗ-
ಕೂ ಸುಖವ ತೆರುವ ಧ್ಯೇಯವೆ ದಿವ್ಯತರವಹುದು.
ತನ್ನ ನೆಲೆಯರಿತು ಮಿಕ್ಕವರಿಗೆಡರೀಯದಿರೆ
ಕಷ್ಟವೇನಿಹೆ ಜಗದಿ ಜೀವನಕೆ?

**ಕೃಪಾಚಾರ್ಯ** — ಒಬ್ಬನೊಬ್ಬನನುಳಿಸದಿಹನೆಂಬ ಭಯವೊಂದು
ಹಲವು ಶಂಕೆಗಳಾಗಿ ಹಿಂಸೆಗಾಸ್ಪದವಿರದೆ?

**ಗೌತಮ** — ತಮ್ಮ ತಮ್ಮೊಳಗಾದ ಭಯದೊಳೆತ್ತಿದ ಸಶ್ತ್ರ-
ವೆಲ್ಲವಿಳಿಸಿದರವರು. ಬಲವು ಗೆಲವಾಗದಿರೆ
ಪ್ರೇಮಜೀವನಕಾಗಿ ಎಲ್ಲರೊಮ್ಮತವರಸಿ
ನಿಂದಿಹೆವು ನಾವಿಂದು. ಶಾಂತಿ ವಿಜಯದ ಸುಖವ
ಧರೆಗೆ ನೀಡಲು ಬೇಕು; ಆಳ್ತನದ ಹೆಮ್ಮೆಯದು.
ಹಲವು ಪಕ್ಷಗಳೊಂದೆ ತಲದಿ ಬೆರೆದೆಲ್ಲರಿಗೆ
ನೆಮ್ಮದಿಯ ಕೊಡುವೊಂದೆ ಜಗವೆನಿಸುತಿರಬೇಕು.

ಕೃಪಾಚಾರ್ಯನು ನಿರುತ್ತರನಾಗಿ ತಲೆದೂಗಲು ಸಭೆಯು ನಿಶ್ಶಬ್ದವಾಗುತ್ತದೆ.

▪▪▪▪▪▪▪▪

## ದೃಶ್ಯ ೧೦

ಗೌತಮ ಋಷಿಯ ಬೋಧಾಮೃತದ ಸವಿಗೆ ಮೈಮರೆತ ಧೃತರಾಷ್ಟ್ರನು ನೀರವನಾಗಿ ಕುಳಿತಿರುತ್ತಾನೆ. ಸಭೆಯು ಪ್ರಶಾಂತವಾಗಿದೆ. ಆಗ ಶ್ರೀಕೃಷ್ಣನು ಭೀಮಸೇನನೊಡನೆ ಪ್ರವೇಶಿಸುವನು. ಸಭಾಸದರು, ಎದ್ದು ಪರಮಾತ್ಮನ ಪಾದಗಳನ್ನು ಸ್ಮರಿಸಿ ವಂದಿಸಿ ನಿಂತುಕೊಳ್ಳುವರು. ಧೃತರಾಷ್ಟ್ರಭೂಪತಿಯು ಸಿಂಹಾಸನದಿಂದ ಎದ್ದು ಕೆಳಗಿಳಿದು ಕೃಷ್ಣನಿಗೆ ವಂದಿಸಿ,—

**ಧೃತರಾಷ್ಟ್ರ**—ತೆರೆದೆನಕ್ಷಿಯನಿಂದು ಭಗವಂತ! ನಿನ್ನದ-
ರ್ಶನದಿಂದ ನನ್ನ ಮೌಢ್ಯವು ತೊಲಗಿ ನಿಂತಿಹುದು!
ಭೀಮನೆಲ್ಲಿಹನವನ ಕಾಣಲಿಚ್ಛಿಪೆ ನಾನು!

**ಕೃಷ್ಣ**—ಧನ್ಯ ನೀ ಧೃತರಾಷ್ಟ್ರ! ಧನ್ಯನಹುದೈ ನೀನು!
ಮೊದಲಿನುಕ್ಕಿನ ನಿನ್ನ ಭೀಮನಳಿದಿಹನೀಗ
ಪ್ರೇಮವುಬ್ಬಿದ ನಮ್ಮ ಭೀಮ ಬಂದಿಹನಿಲ್ಲಿ.
ಪ್ರೇಮ ಭೀಮಂ ನಿತ್ಯ ನಿಷ್ಕಾಮವಂತನು; ನಿನ್ನ
ನಮ್ಮ ವಾಂಛಿತವೆಂತೊ ಅಂತೆ ನಡೆಯಲು ಇಹನು.
ಸರ್ವ ಶಸ್ತ್ರವನಿಳಿಸಿ ಶಾಂತರೂಪನು ಎನಿಸಿ
ನಿಂದು ನಿನ್ನೆಡೆಗೈದಿ ವಂದಿಸುತ್ತಿಹನೀಗ,

ಎನಲು ಧೃತರಾಷ್ಟ್ರನು ತನ್ನ ಸರ್ವಸ್ವವನ್ನೂ ಮರೆತು ಭೀಮನನ್ನೂ, ಪಾಂಡವರನ್ನೂ ಆಲಿಂಗಿಸುವನು. ಎಲ್ಲರೂ ತಂತಮ್ಮ ಆಸನಾರೂಢರಾಗುವರು.

**ಕೃಷ್ಣ**—ರಾಜಾಧಿರಾಜ ನೀ ರಾಜಶ್ರೇಷ್ಠನು! ವೀರ
ಪುತ್ರನಿವರನು ಪ್ರೇಮದಿಂ ಗೆಲ್ದು ವಶಪಡಿಸಿ-
ಕೊಂಡಿರುವೆ; ಇನ್ನು ಈ ಧರೆಯಲ್ಲಿ ನಿನಗಾರು
ಸಮವಹರು! ತನ್ನೊಳುದಿಸಿದರಾದರಹಿತ ಶ-
ಕ್ತಿಯ ಕಳೆದು ಕೊಂಡೀಗ ವಿಹಿತವಂತರ ಕೂಡಿ
ಸರ್ವ ಜನ ಸುಖವನ್ನು ಬಗೆದೆ ನೀ. ನಿನ್ನ ವೈಭ-
ವವುಳಿದು ಜಗದಾದಿ ಪರಿಯಂತ ರಂಜಿಪುದು.

**ಧೃತರಾಷ್ಟ್ರ**— ನನಗೇಕೆ ರಾಜ್ಯವಿದು! ಎಲ್ಲರಿಗೆ ಬೇಕಾಗಿ
ಈ ರಾಜ್ಯ ಈ ವೈಭವವು! ನಿನ್ನ ಮತವೆಂತೊ
ಅಂತಿದನು ಮಾಡಿಸೈ ಪರಮಾತ್ಮ! ಎಲ್ಲವರು
ನೆರೆದಿರುವ ಈ ಸಭೆಯೊಳಿನ್ನದೇಂ ಮತವಿಹುದು!
ಸರ್ವರಭಿಮತಕಾಗಿ ತೊರೆದೆನೀ ಸಿಂಹಾಸ-
ನವನು ನಿನ್ನಿದಿರಿನಲಿ! ನಿನ್ನಿಚ್ಛೆಯೆಂತುಟೋ
ಅಂತೆಸೆಯು! ಪಾಂಡವರ ಪೆಸರಿಂದ ಶಾಂತಿಯನು
ಸ್ಥಾಪಿಸಲಿ! ನೀನವರ ಬೆಳಕಾಗಿ ಜಗವನ್ನೆ
ಮೆಚ್ಚಿಸುತ ನಮ್ಮ ರಕ್ಷಿಸಿ ಸಲಹು, ವಂದಿಪೆನು.

ಎಂದಾಗ ಸರ್ವರೂ ಜಯಘೋಷವನ್ನು ಮಾಡುವರು.

**ಕೃಷ್ಣ**—ತಾತ್ವಿಕರು, ಋಷಿವರರು, ರಾಜಕಾರಣ ಪಟುಗ-
ಳಾಚಾರ್ಯ ಪ್ರಮುಖರೆಲ್ಲರು ನೆರೆದ ಸಭೆಯಿದುವು.
ರಾಜವರ, ನೀನಿಂದು ಸರ್ವರಭಿಮತಕಾಗಿ,
ಮೆಚ್ಚಿ ಜನ ಸುಖಕಾಗಿ ಜಾಗತಿಕ ರಕ್ಷಣೆಯ-
ನೆಮಗಿತ್ತುದೇ ಶಾಂತಿವಿಜಯವದು; ಧರ್ಮಪು-
ತ್ರನ ರಾಜ್ಯವಿನ್ನು ಮುಂದಕೆ ನೆಮ್ಮದಿಯನಾಂತು
ಮೆರೆಯಲಿದೆ. ಈ ಮಹಾಪುರುಷರೊರೆದಿಹ ಮಾತೆ
ಮತವಾಗಿ ಹಿತವಾಗಿ ಬೆಳಗಲಿದೆ. ಒಬ್ಬನೊ-
ಬ್ಬನ ದೂರವೆಸೆದ ಸಂಶಯದೃಷ್ಟಿ ಪ್ರತ್ಯಕ್ಷ
ಸಮಯೋಚಿತಾಲೋಚನೆಯ ಸೇತುವಿಕೆಯಿಂದ
ಹರಿದು ಹಸನಾಯ್ತು! ಈ ಭೀಮನನು ಮನ್ನಿಸಿದ
ನಿನ್ನ ಮಮತೆಯೊಳಾತ ಮೆಯ್ಮರೆದು, ಸಂತಸದೊ-
ಳುಬ್ಬಿಹನು.

**ಕೃಪಾಚಾರ್ಯ**—ನಿನ್ನಿಂದ ನಮ್ಮ ಮನಸಿನ ಮೌಢ್ಯ ಮಾಯವಾ-
ಯಿತು. ಮುಂದೆ ನಿನ್ನದಾಗಿಹುದೆಲ್ಲ.

**ವ್ಯಾಸ**—ಭಗವಂತನ ದರ್ಶನವು ಲಭಿಸಿ ಪಾವನವಾದ
ಸಭೆಯಿದರ ಪ್ರಭೆಯೊಳೆಲ್ಲರ ಮನದೊಳಿದ್ದ ಸಂ-

ಶಯುಸೂಯೆ ತೊಲಗಿ ಮುಂದಿನ ಚಿತ್ರ ವ್ಯಕ್ತವಾ-
ಯಿತು. ಅದರ ಪರಿಯೆಲ್ಲರಿಗೆ ಮನಕೆ ನೆಮ್ಮದಿಯ
ತಂದಿಹುದು.

ಗೌತಮ—ಮನದೊಳುದಿಸಿದ ಹಲವು ಶಂಕೆಗಳು ಬೆಳೆದು ಬಲಿ-
ಯಲು ಮುನ್ನ ಅದನೆಮ್ಮ ತೆರೆದೆದೆಯು ತೋರಿ ಪರಿ-
ಹರಿಸಿಕೊಳ್ಳಲು ಬೇಕು.

ಧೃತರಾಷ್ಟ್ರ—ಹಲವು ಬಗೆಗಳು ಬೆಳೆದು ಬಂದ ಗೊಂದಲದಲ್ಲಿ
ವಿಹಿತವನು ಕಾಣದಿರೆ ಕಂಗೆಡುವ ಮಾನವರ,
ಉಚಿತ ಮಾರ್ಗವ ತೋರಿ, ಪೊರೆವನೀ ಪರಮಾತ್ಮ!
ಅವನ ಪ್ರತ್ಯಕ್ಷದಲಿ ಸರ್ವಸ್ವವೂ ವಿದಿತ-
ವಹುದಿಳೆಗೆ. ಸೋಲುಗೆಲುಗಳವನ ನೆಲೆಯನರಿ-
ಯದ ಮನಕೆ;—ಅವನ ಧರ್ಮವೆ ಜಯಿಸಿ ತೋರ್ಪುದ-
ಲ್ಲದೆ ಮಿಕ್ಕ ಮಾನವತೆ, ಬಗೆಯಬಲ್ಲುದೆ ಬೇರೆ
ರೀತಿಯನು!

ವ್ಯಾಸ—ಕಳೆದ ಕಥನಗಳಿಂದ ತಿದ್ದಿ ಬುದ್ಧಿಯ, ಮುಂದೆ
ಒಳಿತನೂಹಿಸಿ, ದಿವ್ಯ ಮಾರ್ಗದೊಳಗಾವಿಂದು
ಸರ್ವಜನ ಸುಖವೀಯೆ ವಿಬುಧರೆನಿಪೆವು; ಮೇಣು
ಪರಮಾತ್ಮನಿಂಗಿತವದೆಂತೊ ಅಂತಾದುದೀ
ಧರ್ಮಸ್ಥಾಪನೆಯೆಂಬ ವಿಜಯವೃತ್ತಾಂತವಿದು;
ಭಾರತೀ ಸಂಸ್ಕೃತಿಯ ಶಾಂತಿಸಂದೇಶವಿದು.
ನೀನೊಪ್ಪಿದುದರಿಂದ, ವಿಶ್ವದಲಿ ಮುನ್ನ ರಣ
ಭಯವಿಲ್ಲ. ಜನತೆಯೇಳ್ಗೆಯೆ ನಮ್ಮ ಗುರಿಯಹುದು.

ಕೃಷ್ಣ—ಧರ್ಮ ತಾ ಜಗವನೇ ಧರಿಸಿಹುದು; ಸುಖಶಾಂತಿ
ಗಳಿಗಿದೇ ಸನ್ಮಾರ್ಗ. ಯುಗಯುಗಾಂತರ-
ಕೆಲ್ಲ ಸದ್ಧರ್ಮಸಂಸ್ಥಾಪನೆಯ ಗೈವುದೇ
ವಿಶ್ವತತ್ವವನರಿವ ಸಾಧನೆಯು; ಮಾನವತೆ

ಸಂಸ್ಕರಿಸಿಕೊಳ್ಳುವ ಕುಶಲತೆಯದರ ಮೂಲವಿದೆ.
ಪ್ರಕೃತಿ ಶೀಲವನರಿತು ವಿಶ್ವನಿಯಮವನೊರೆವ
ಸಾಧನವೆ ವಿಜ್ಞಾನ; ಈ ನಿಯಮ ಮೀರಲಸ-
ದಳವೆಂಬುದೇ ಜ್ಞಾನ; ಜ್ಞಾನವಿಜ್ಞಾನ ಮಾ-
ರ್ಗಗಳೆರಡು ಜೀವಕೋಟಿಯ ಸುಖಕೆ ಮೀಸಲಿದೆ;
ಮೀರಲದು ಪ್ರತಿಕೂಲ ಸ್ಥಿತಿಯಾಂತು
ತೊಡರನೀಯದೆ ಇರದು; ಇದು ನಾವು ಕರ್ಮಫಲ-
ವೆನ್ನುವೆವು; ಮಾನವತೆ ಶಾಂತಿಯನೆ ಕೋರುವುದು;
ಸ್ವಾತಂತ್ರ್ಯವನು ಬಯಸಿ ನೆಮ್ಮದಿಯನರಸುವುದು.
ಸತ್ಯ, ಶಾಂತಿ, ಅಹಿಂಸೆ, ನೀತಿಗಳ ಅವಲಂಬ-
ನವೆ ಜಗಕೆ ಹಿತವಹುದು; ಧ್ಯಾನ ಧರ್ಮೋಪಾಸನೆಗೆ
ವ್ಯಕ್ತಿಸ್ವಾತಂತ್ರ್ಯವಿದೆ. ಪ್ರಜೆಯ ಸುಖ ರಾಜ್ಯ ಸುಖ.
ವಿಶ್ವಶಾಂತಿಗೆ ಇದುವೆ ನೆಲೆಯಹುದು.

ಎನ್ನುವಾಗ, ಎಲ್ಲರೂ ಏಕಾಗ್ರಚಿತ್ತತೆಯಿಂದ ಶಾಂತಮೂರುತಿಯಾದ ಶ್ರೀಕೃಷ್ಣನನ್ನು ಧ್ಯಾನಿಸುತ್ತಿರುವರು.



## ಈ ಗ್ರಂಥಕರ್ತರಿಂದ
## ರಚಿತವಾದ ಇತರ ಗ್ರಂಥಗಳು

ಕಬ್ಬುಹಬ್ಬು (ಕವಿತಾ ಸಂಗ್ರಹ)



ನಡೆನುಡಿ (ಭಾವಗೀತೆಗಳು)



ಛಲ (ಕವಿತಾ ಸಂಗ್ರಹ)



ಕಿರಣ (ಭಾವಗೀತೆಗಳು)



ಉದಯ (ಕವಿತಾ ಸಂಗ್ರಹ)



ಬಯಲನೋಟ (ಕಾವ್ಯ ಸಂಗ್ರಹ)



ವಿಮರ್ಶಕ (ಕವಿತೆಗಳು)



ಸಾಹಿತ್ಯ ಪರಿಚಯ (ವಿಮರ್ಶೆಗಳು)



ಸತ್ಯಶೋಧನ(ಪತ್ತೇದಾರಿಕಾದಂಬರಿ)



ಚಂಪೆಯ ವಾದ (ಸಣ್ಣ ಕಥೆಗಳು)



ಬದಲಾವಣೆ (ಪ್ರಹಸನಗಳು)



ಸ್ವರಾಜ್ಯ ಸಂಪಾದನೆ (ಗದ್ಯ ನಾಟಕ)



ರೋಹಿಣಿಯ ವಾಗ್ಮಾಲ
(ಲಘು ಹಾಸ್ಯ)

(ಸದ್ಯದಲ್ಲೆ ಪ್ರಕಟವಾಗಲಿವೆ)





ಶ್ರೀನಿವಾಸರಾವ್, ಕದಿರೆ–ಇವರ ಕವಿತೆಗಳನ್ನು ಓದದಿರುವ ಕನ್ನಡ ಸಾಹಿತ್ಯ ಪ್ರೇಮಿಗಳು ಅತಿ ವಿರಳ. ಕನ್ನಡದ ಉದ್ದಾಮಪತ್ರಿಕೆಗಳಲ್ಲೆಲ್ಲಾ ಇವರ ಛಂದೋಬದ್ಧ ವಿಚಾರಪೂರ್ಣ ಕವಿತೆಗಳು ಪ್ರಕಟಗೊಂಡಿವೆ. ಸಣ್ಣ ಕಥೆ, ನಾಟಕ, ಲೇಖನ ಇತ್ಯಾದಿ ಕೃತಿಗಳೂ ಪ್ರಕಟಗೊಂಡಿವೆ. ಇವರು ಬರೆದ 'ಮನವಿ' ಎಂಬ ಕವನ ಸಂಗ್ರಹ 1931ರಲ್ಲಿ ಪ್ರಕಟವಾಗಿ ಜನಮನ್ನಣೆಯನ್ನು ಪಡೆದಿದೆ. ಈಗ ಬೆಳಕಿಗೆ ಬಂದ ಪದ್ಯರೂಪದಲ್ಲಿರುವ ಈ ನಾಟಕ--ಭಾರತಸಂದೇಶ– ಜನರ ಮೆಚ್ಚುಗೆಯನ್ನು ಪಡೆಯುವುದರಲ್ಲಿ ಅನುಮಾನವಿಲ್ಲ; ಅದರಲ್ಲಿ ಪ್ರತಿಪಾದಿಸಿರುವ ಮಾನವತೆಯು ಓದುಗನ ಆತ್ಮವನ್ನು ಮಿಡಿಯದಿರದು.

ಕದಿರೆಯವರ ಹುಟ್ಟೂರು ಮಂಗಳೂರು. ಸ್ಥಳೀಯ ಕೋರ್ಟಿನಲ್ಲಿ ಸರಕಾರಿ ಉದ್ಯೋಗ. ಶ್ರೀಯುತರು ಬಿಡುಸಮಯ ಇದ್ದಾಗಲೆಲ್ಲಾ ಮಂಗಳೂರಿನ ಸಮಸ್ತ ಸಾಹಿತ್ಯ ಕಲೆಗಳಿಗೆ ಮೀಸಲಾದ ಸಂಸ್ಥೆಗಳಲ್ಲಿ ಆಕ್ತಿಯಿಂದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಬಹುಕಾಲ ಬಾಳಿ ಅವರು ಸಾಹಿತ್ಯ ಕಲೆಗಳ ಸೇವೆಗೈವರೆಂಬ ಆಸೆ ನಮಗಿದೆ.

— ಪ್ರಕಾಶಕರು.